# ಮತ–ಪಥ





ರಚಿತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು



www.thraithashakam.org





# ಮತ – ಪಥ


ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (72) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದಕರು

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---





ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಜುಲೈ–2016

ಪ್ರತಿಗಳು : 1000 **ಬೆಲೆ. 45/–**

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.



04

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
    ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ – ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ– ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು– ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು– ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು– ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು– ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು– ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.



## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P
Cell : ಶ್ರೀನಿವಾಸ–09705864675, ಲಕ್ಷ್ಮಿ ಣಾರಾಯಣಾಚಾರಿ–09440556968.
ವೆಂಕಟೇಶ್–08096816963.

**(ಇಂದೂ ಜ್ಞಾನ ವೇದಿಕೆ ಸದಸ್ಯರು)**

**ಎ. ರಾಘವೇಂದ್ರ ಶ್ರೇಷ್ಠಿ**
ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A
Cell:9611133635, 9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು (ಪೊ)
ಚಿಕ್ಕಸೂಗುರು (ತಾ), ರಾಯಚೂರು (ಜಿ)
Cell : 98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ವಾರ್ಡ್.ನೆಂ.–38,
ಬೆಂಗಳೂರು–560085
Cell : 9036982829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಬಸವರಾಜ ಅಂಗಡಿ**
(ಸಾ) (ಪೊ) ಪೋತ್ನಾಳ,
(ತಾ) ಮಾನವಿ, ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಮಾರುತಿ ಟೆಂಟ್ ರೋಡ್, ಚಾಮರಾಜ
ಮೊಹಲ್ಲ, ಮೈಸೂರ್–547097
Cell : 9986369118

**T.V. ರಮಣ**
ಕತ್ತರಗುಪ್ಪೆ, ವಾರ್ಡ್.ನೆಂ. –38,
ಬೆಂಗಳೂರು–560068
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್,
ಬೆಂಗಳೂರು–560066
Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲೀಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

ತಪ್ಪದೆ ಓದಿರಿ! ಓದಿಸಿರಿ!!

## ಪ್ರಥಮ ದೈವ ಗ್ರಂಥ

# ತ್ರೈತ ಸಿದ್ಧಾಂತ ಭಗವದ್ಗೀತೆ

**(578 ಶ್ಲೋಕಗಳ ವಚನ ಗ್ರಂಥ)**

ಇದು ಆಧ್ಯಾತ್ಮಿಕ ವಿದ್ಯೆಯಲ್ಲಿ ವಿಪ್ಲವಾತ್ಮಕ ತಿರುವು ತಿರುಗಿದ ಭಗವದ್ಗೀತೆ. 55 ಶ್ಲೋಕಗಳಿಗೆ ಪೂರ್ತಿ ಭಾವ ಬದಲಾವಣೆಯೊಂದಿಗೆ ತಯಾರಾಗಿದೆ. ಮೂರು ಆತ್ಮಗಳನ್ನು ಕುರಿತು ಶಾಸ್ತ್ರಾಧಾರದಿಂದ ವಿವರಿಸಿ ಬೋಧಿಸಿದ ಮೊಟ್ಟ ಮೊದಲ ಭಗವದ್ಗೀತೆ. ಮೊದಲು ಎಷ್ಟೋ ಜನರು ಬರೆದ ಭಗವದ್ಗೀತೆಗಳಿಗೆ ನೂರಕ್ಕೆ 90ರಷ್ಟು ವಿಭಿನ್ನ ಭಾವಗಳಿಂದ ಕೂಡಿಕೊಂಡಿದೆ. ಎಷ್ಟೋ ಪ್ರತ್ಯೇಕ ಅರ್ಥಗಳೊಂದಿಗೆ ದೇವರು ಹೇಳಿದ ನಿಜ ಭಾವಗಳನ್ನು ಹೇತುಬದ್ಧವಾಗಿ ವಿವರಿಸಿರುವುದು ಮತ್ತು ಹೇತುವಾದಿಗಳು ಸಹ ಖಂಡಿಸಲಾರದ ಭಗವದ್ಗೀತೆ ಇದು ಒಂದೇ. ಗರ್ಭಸ್ಥ ಶಿಶುವಿಗೆ ಪ್ರಾಣ ಇಲ್ಲ ಎನ್ನುವುದು, ಹತ್ಯೆಯನ್ನು ವಿವರಿಸಿ ಆತ್ಮಹತ್ಯೆಯಾಗಿ ಹಾಗೆಯೇ ಆತ್ಮಹತ್ಯೆಯನ್ನು ಹತ್ಯೆಯಾಗಿ ಹೇಳುವುದು, ಇಂತಹವು ಬಹಳ ಜನರಿಗೆ ಸಹಿಸಿಕೊಳ್ಳಲಾರದಂತಹ ವಿಪ್ಲವಾತ್ಮಕ ಹಾಗೂ ಸಂಚಲನ ವಿಷಯಗಳೆಷ್ಟೋ ಈ ಗ್ರಂಥದಲ್ಲಿ ಇವೆ. ಶ್ರೀಕೃಷ್ಣನ ಯಥಾರ್ಥ ಭಾವವನ್ನು ತಿಳಿಸಿ, ವಾಸ್ತವ ಜ್ಞಾನ ಪಥದಲ್ಲಿ ನಡೆಸಿ, ಮೋಕ್ಷಗಮ್ಯವನ್ನು ಸೇರಿಸುವುದು ಈ ಗ್ರಂಥ ರಾಜ.

**ರಚಿತ : ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಮತ – ಪಥ



ಭೂಮಂಡಲದಲ್ಲಿ ದೇವರನ್ನು ವಿಶ್ವಾಸಿಸಿದ ಮನುಷ್ಯರನ್ನು ಮೂರು ಭಾಗಗಳಾಗಿ ವಿಂಗಡಿಸಬಹುದು. ಹಾಗೆಯೇ ದೇವರನ್ನು ವಿಶ್ವಾಸಿಸಿದ ಮತಗಳನ್ನೂ ಸಹ ಮೂರಾಗಿಯೆ ಹೇಳಿಕೊಳ್ಳಬಹುದು. ಆ ಮೂರು ಮತಗಳಲ್ಲಿ ಪ್ರಾಚೀನವಾದುದು, ಎಲ್ಲದಕ್ಕಿಂತ ಮೊದಲು ಹುಟ್ಟಿದ ಹಿಂದೂಮತ, ನಂತರ ಹುಟ್ಟಿರುವುದು ಕ್ರೈಸ್ತವ ಮತ, ಆ ನಂತರ ಹುಟ್ಟಿರುವುದು ಇಸ್ಲಾಮ್‌ಮತ. ಮುಖ್ಯವಾದ ಈ ಮೂರು ಮತಗಳಲ್ಲಿ ದೇವರನ್ನು ಕುರಿತು ಸ್ಪಷ್ಟವಾಗಿ, ಬಹಳ ಹತ್ತಿರವಾಗಿ ಬೋಧಿಸಿರುವುದು ಹಿಂದೂಮತದಲ್ಲಿನ ಬೋಧನೆಯೇ ಎಂದು ಹೇಳಬಹುದು. ನಂತರ ಬೋಧನೆಯಲ್ಲಿ ಎರಡನೆ ಸ್ಥಾನದಲ್ಲಿರುವುದು ಕ್ರೈಸ್ತಮತ. ಹಾಗೆಯೇ ಬೋಧನೆಯಲ್ಲಿ ಮೂರನೆ ಸ್ಥಾನವನ್ನು ಹೊಂದಿರುವುದು ಇಸ್ಲಾಮ್‌ಮತ.

ಬೋಧನೆಗಳಲ್ಲಿ ಮೂರನೆಸ್ಥಾನದಲ್ಲಿ ಇಸ್ಲಾಮ್ ಇದ್ದಲ್ಲಿಯೂ ದೇವರ ಮಾರ್ಗದಲ್ಲಿ ಮೊದಲನೆಯದು, ದೇವರನ್ನು ಪೂರ್ತಿ ವಿಶ್ವಾಸಿಸಿರುವುದು, ದೇವರಿಗೆ ಬಹಳ ಹತ್ತಿರವಾಗಿರುವುದು ಇಸ್ಲಾಮ್‌ಮತವೇ ಎಂದು ಹೇಳಬಹುದು. ಹಾಗೆಯೇ ವಿಶ್ವಾಸದಲ್ಲಾಗಲಿ, ಸಾಮೀಪ್ಯದಲ್ಲಾಗಲಿ ಎರಡನೆ ಸ್ಥಾನದಲ್ಲಿರುವುದು ಕ್ರೈಸ್ತಮತ. ಕೊನೆಯದಾಗಿ ಮೂರನೆ ಸ್ಥಾನದಲ್ಲಿರುವುದು ಹಿಂದೂಮತವೆಂದು ಹೇಳಬಹುದು. ಒಂದು ಲೆಕ್ಕಪ್ರಕಾರ ಹೇಳಿಕೊಂಡರೆ ಇಸ್ಲಾಮ್‌ಮತದಲ್ಲಿ ದೇವರ ಮೇಲೆ ವಿಶ್ವಾಸ ಶೇಕಡ 90% ರಷ್ಟು ಇರುವಾಗ, ಕ್ರೈಸ್ತಮತದಲ್ಲಿ ಶೇಕಡ 50% ರಷ್ಟು ಇದೆ. ಕೊನೆಯಲ್ಲಿರುವ ಹಿಂದೂಮತದಲ್ಲಿ ಕೇವಲ 2% ರಷ್ಟಾಗಲಿ ಅದಕ್ಕಿಂತ ಕಡಿಮೆಯಾಗಿ ಆಗಲಿ ಇದೆಯೆಂದು ಹೇಳಬಹುದು. ಇಲ್ಲಿ ಈಗ ನಿಮಗೊಂದು ಪ್ರಶ್ನೆಬಂದು ನನ್ನನ್ನು ಕೇಳಬಹುದು. ಪ್ರಶ್ನೆ ಏನೆಂದರೆ! ಇಸ್ಲಾಮ್ ಮತ್ತು ಕ್ರೈಸ್ತರಿಗಿಂತ ಪೂಜೆಗಳು ಮಾಡುವವರೂ, ದೇವಾಲಯಗಳಿಗೆ ಹೋಗುವವರೂ, ಯಜ್ಞಗ್ಗಳು ಮಾಡುವವರೂ, ಬೋಧನೆಗಳು ಹೇಳುವ ಸ್ವಾಮೀಜಿಗಳೂ, ಮಹಿಮೆಗಳು ತೋರಿಸುವ ಬಾಬಾಗಳು ಎಷ್ಟೋಜನ ಇರುವಾಗ

ಹಿಂದೂಮತದಲ್ಲಿ ಎಷ್ಟೋ ಹೀನವಾಗಿ ಕೇವಲ 2% ರಷ್ಟು ವಿಶ್ವಾಸವಿದೆ ಅನ್ನುತ್ತಿದ್ದೀರೇನು? ಎಂದು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ನಾವು ಹೇಳುವುದು ದೇವರುಗಳಿಗೂ ಸಹ ದೇವರಾದ ಆ ದೇವರ ಮೇಲಿನ ವಿಶ್ವಾಸವನ್ನು ಕುರಿತು ಹೇಳಿದ್ದೇವೆ. ನೀವು ಕೇಳುವುದು ದೇವರು ಹುಟ್ಟಿಸಿದ ದೇವತೆಗಳ ಭಕ್ತಿಯನ್ನು ಕುರಿತು. ದೇವತೆಗಳ ಭಕ್ತಿ ಹಿಂದೂಮತದಲ್ಲಿ ಇರುವಷ್ಟು ಯಾವ ಮತದಲ್ಲಿ ಇಲ್ಲ. ದೇವತಾಭಕ್ತಿ 99% ರಷ್ಟು ಹಿಂದೂಗಳಲ್ಲಿಯೇ ಇದೆಯೆಂದು ಹೇಳಬಹುದು. ಆದರೆ ದೇವರ ಮೇಲೆ ಭಕ್ತಿ ಕೇವಲ 2 ಶಾತವೂ ಸಹ ಇಲ್ಲವೆಂದು ಹೇಳುತ್ತಿದ್ದೇವೆ. ಉಳಿದ ಎರಡು ಮತಗಳಲ್ಲಿ ದೇವರ ಮೇಲೆ ಭಕ್ತಿ ವಿನಹ ದೇವತೆಗಳ ಮೇಲೆ ಭಕ್ತಿ ಇಲ್ಲವೆಂದೇ ಹೇಳಬಹುದು. ದೇವರನ್ನು ಕುರಿತು ಬೋಧನೆಗಳಿರುವ ತಲೆಮಾಣಿಕ್ಯವಾದಂತಹ ಗ್ರಂಥಗಳು ಮೂರು ಮತಗಳಲ್ಲಿ ಮೂರು ಇವೆ. ಅವು ಇಸ್ಲಾಮ್‌ಮತದಲ್ಲಿ ಪವಿತ್ರ ಖುರಾನ್, ಕ್ರೈಸ್ತಮತದಲ್ಲಿ ಪರಿಶುದ್ದ ಬೈಬಲ್, ಹಿಂದೂಮತದಲ್ಲಿ ಭಗವದ್ಗೀತೆ ಇದೆ. ಇಲ್ಲಿ ಗಮನಿಸಬೇಕಾದ ವಿಷಯ ಏನೆಂದರೆ ಇಸ್ಲಾಮ್ ಮತಗ್ರಂಥವಾದ ಖುರಾನ್ ಮುಂದೆ **ಪವಿತ್ರ** ಅನ್ನುವ ಬಿರುದು ಇದೆ. ಹಾಗೆಯೇ ಕ್ರೈಸ್ತರಲ್ಲಿನ ಬೈಬಲ್ ಮುಂದೆ **ಪರಿಶುದ್ಧ** ಅನ್ನುವ ಬಿರುದು ಇದೆ. ಆದರೆ ಒಂದು ಹಿಂದೂಮತದಲ್ಲಿನ ಭಗವದ್ಗೀತೆಯ ಮುಂದೆ ಯಾವ ಬಿರುದು ಇಲ್ಲ. ಹಿಂದೆ ಹುಟ್ಟಿದ ಬೋಧನೆಗಳಿಗೆ ಪವಿತ್ರ ಎಂದು, ಪರಿಶುದ್ಧ ಎಂದು ಬಿರುದುಗಳು ಇರುವಾಗ ಮೊದಲು ಹುಟ್ಟಿದ ಭಗವದ್ಗೀತೆಗೆ ಮೊದಲು ಬಿರುದು ಇಲ್ಲವಾ ಎಂದು ಯೋಚಿಸಿದರೆ, ಕಳೆದ ಕಾಲದಲ್ಲಿ ಹೋಗಿನೋಡಿದರೆ ಭಗವದ್ಗೀತೆಗೆ ಮೊದಲು ಅದರ ಗೌರವವನ್ನು ತಿಳಿಸುವ ಬಿರುದುಗಳಿದ್ದವೆಂದು ತಿಳಿಯುತ್ತಿದೆ. ಅಷ್ಟೇ ಅಲ್ಲ ಇನ್ನೂ ಹಿಂದಕ್ಕೆ ಹೋಗಿ ನೋಡಿದರೆ ಇಂದು ನಮಗೆ ತಿಳಿಯದ ಎಷ್ಟೋ ಸತ್ಯಗಳಾದ ರಹಸ್ಯಗಳು ಹೊರಬೀಳುತ್ತಿವೆ.

ಈಗ ಪ್ರಚಾರದಲ್ಲಿರುವ ಭಗವದ್ಗೀತೆ ಭಗವಂತನಾದ ಶ್ರೀಕೃಷ್ಣನಿಂದ ಅರ್ಜುನನಿಗೆ ದ್ವಾಪರಯುಗದಲ್ಲಿ (ದ್ವಾಪರಯೋಗದಲ್ಲಿ) ಹೇಳಿದಲ್ಲಿಯೂ ಅದನ್ನು

ಪೂರ್ವವೆ ಸೃಷ್ಟಿ ಆದಿಯಲ್ಲಿಯೇ ಪರಮಾತ್ಮ ಸೂರ್ಯನಿಗೆ ಹೇಳಿದ್ದಾನೆ. ಇದರಿಂದ ಭಗವದ್ಗೀತೆ ಸೃಷ್ಟಿ ಆದಿಯಲ್ಲಿಯೇ ಇದೆಯೆಂದು ತಿಳಿಯುತ್ತಿದೆ. ಸೃಷ್ಟ್ಯಾದಿಯಿಂದ ಇರುವ ಭಗವದ್ಗೀತೆಯಲ್ಲಿ ಇಂದು ಕ್ರೈಸ್ತಮತದಲ್ಲಿಯೂ, ಇಸ್ಲಾಮ್‌ಮತದಲ್ಲಿಯೂ ಹೇಳಿದ ಸಾರಾಂಶ ಇದೆ. ಆದ್ದರಿಂದ ಗೀತೆಗೆ ಪವಿತ್ರ ಪರಿಶುದ್ಧ ಅನ್ನುವ ಎರಡು ಬಿರುದುಗಳು ಇವೆ. ಭಗವದ್ಗೀತೆ ಭೂಮಿಮೇಲಿರುವ ಯಾವ ಮತದ ಹೆಸರಿನಿಂದಲೂ ಹೇಳಲ್ಪಟ್ಟಿಲ್ಲ ಮತ್ತು ದೈವಸಂಬಂಧವಾದ ಪರವನ್ನು ಕುರಿತು ಮಾತ್ರವೇ ಬೋಧಿಸಿದೆ. ಆದ್ದರಿಂದ ಅದಕ್ಕೆ ಪರಮ ಎಂದು ಬಿರುದು ಮೊದಲೆ ಇದೆ. ಭಗವದ್ಗೀತೆ ಪರವನ್ನು (ದೈವವನ್ನು) ತೋರಿಸುವುದು, ಜ್ಞಾನಪವಿತ್ರತೆಯನ್ನು ಹೊಂದಿದೆ ಮತ್ತು ಕರ್ಮವೆಂಬ ಕೊಳೆಯನ್ನು ತೊಲಗಿಸುವುದಾಗಿದೆ. **ಆದ್ದರಿಂದ ಗೀತೆಯನ್ನು ಪರಮ ಪವಿತ್ರ ಪರಿಶುದ್ಧ ಗ್ರಂಥವೆಂದು ದ್ವಾಪರಯುಗಕ್ಕಿಂತ ಮೊದಲೆ ಕೃತಯುಗದಲ್ಲಿಯೇ ಅನ್ನುತ್ತಿದ್ದರು.** ಭೂಮಿಮೇಲೆ ಆ ಕಾಲದಲ್ಲಿ ಎಲ್ಲರೂ ಜ್ಞಾನ ತಿಳಿದವರಿರುತ್ತಿದ್ದರು. ಮಾಯ ಪ್ರಭಾವದಿಂದ ಸ್ವಲ್ಪ ಕಾಲಕ್ಕೆ ಮನುಷ್ಯರು ದೈವಜ್ಞಾನಕ್ಕೆ ದೂರವಾಗಿ ಹೋಗುತ್ತಾಬಂದಿದ್ದಾರೆ. ಆ ವಿಧವಾಗಿ ಮನುಷ್ಯ ಅಜ್ಞಾನದ ಕಡೆ ಹೋಗುತ್ತಾ ಭಗವದ್ಗೀತೆಗೆ ಇರುವ ಬಿರುದುಗಳನ್ನು ಮರೆತುಹೋಗಿದ್ದಾರೆ. ಅಷ್ಟೇ ಅಲ್ಲದೆ ಕೊನೆಗೆ ಭಗವದ್ಗೀತೆಯನ್ನೇ ಮರೆತು ಹೋಗಿದ್ದಾರೆ. ಗೀತೆಯಲ್ಲಿನ ಧರ್ಮಗಳನ್ನು ಪೂರ್ತಿಮರೆತು ಹೋಗಿದ್ದಾರೆ. ದ್ವಾಪರಯೋಗ (ಯುಗ) ಕೊನೆಯಲ್ಲಿ ಧರ್ಮಗಳಿಗೆ ಪೂರ್ತಿ ಹಾನಿ ಏರ್ಪಟ್ಟಿದೆ. ಅಂತಹ ಸಂದರ್ಭಗಳಲ್ಲಿ ದೇವರು ಮನುಷ್ಯನಾಗಿ ಹುಟ್ಟಿ ಶ್ರೀಕೃಷ್ಣನಾಗಿ ಪ್ರವರ್ತಿಸಿ ಸಮಯವನ್ನು ನೋಡಿ ಗೀತೆಯನ್ನು ಮತ್ತೊಮ್ಮೆ ಹೇಳಿ ಹೋಗಿದ್ದಾನೆ. ದ್ವಾಪರಯೋಗದ ಕೊನೆಯಲ್ಲಿ ಹೇಳಲಾದ ಭಗವದ್ಗೀತೆ ಕಲಿಯೋಗ ಮೊದಲಕಾಲವಾದ ಪ್ರಸ್ತುತ ಕಾಲದಲ್ಲಿ ಇದ್ದಲ್ಲಿಯೂ ಅದಕ್ಕೆ ಬಿರುದುಗಳು ಸ್ವಲ್ಪವೂ ಇಲ್ಲದಂತೆಹೋಗಿವೆ. ಹಿಂದೆ ಕಲಿಯೋಗದಲ್ಲಿ ಹುಟ್ಟಿದ ಬೈಬಲ್‌ಗೆ ಪರಿಶುದ್ಧ ಗ್ರಂಥವೆಂದು, ಅದಕ್ಕಿಂತ ಎಷ್ಟೋ ಹಿಂದೆ ಹುಟ್ಟಿದ ಖುರಾನ್‌ನನ್ನು ಪವಿತ್ರಗ್ರಂಥವೆಂದು ಕರೆಯುತ್ತಿರುವಾಗ, ಅದಕ್ಕಿಂತ ಎಷ್ಟೋ

ಮೊದಲು ಹುಟ್ಟಿದ ಭಗವದ್ಗೀತೆಯನ್ನು ಯಾವ ಬಿರದಿನಿಂದ ಕರೆಯದೆಹೋಗಿರುವುದರಿಂದ ಗೀತೆಯಲ್ಲಿನ ಜ್ಞಾನವನ್ನೇ ಕಡಿಮೆಮಾಡಿದಂತಾಗಿದೆ. ಬೈಬಲ್, ಖುರಾನ್ ಗ್ರಂಥಗಳಿಗಿಂತ ಮೊದಲು ಹೇಳಲಾದ ಗೀತಾಜ್ಞಾನವು ಎಲ್ಲಾ ವಿಧಗಳ ಪವಿತ್ರವಾದದ್ದು ಪರಿಶುದ್ದವಾದದ್ದು. ಇದಕ್ಕೆ ನಿದರ್ಶನವಾಗಿ ಗೀತೆಯಲ್ಲಿಯೇ ಜ್ಞಾನಯೋಗವೆಂಬ ಅಧ್ಯಾಯದಲ್ಲಿ 38ನೇ ಶ್ಲೋಕದಲ್ಲಿ **"ನಹಿ ಜ್ಞಾನೇನ ಸದೃಶಂ ಪವಿತ್ರ ಮಿಹ ವಿದ್ಯತೇ"** ಎಂದು ಹೇಳಿದ್ದಾರೆ. ಅದರ ಅರ್ಥವನ್ನು ಕ್ಲುಪ್ತವಾಗಿ ಹೇಳಿಕೊಂಡರೆ ಗೀತೆಯಲ್ಲಿ ಹೇಳಿದ ಜ್ಞಾನಕ್ಕೆ ಸಮಾನವಾದುದಾಗಲಿ, ಅದಕ್ಕಿಂತ ಪವಿತ್ರವಾದುದಾಗಲಿ ಇಲ್ಲವೆಂದು ತಿಳಿಯುತ್ತಿದೆ. ಇದೇ ಜ್ಞಾನ ಇತರ ಮತಗ್ರಂಥಗಳಲ್ಲಿ ಇದೆ. ಇದೇ ಜ್ಞಾನ ಸ್ವಲ್ಪ ಶಾತವಿರುವ ಗ್ರಂಥಗಳಿಗೆ ಪವಿತ್ರ ಎಂದು, ಪರಿಶುದ್ದ ಎಂದು ಬಿರುದುಗಳು ಇಟ್ಟಾಗ, ಪೂರ್ತಿ ಶಾತ ಜ್ಞಾನವಿರುವ ಭಗವದ್ಗೀತೆಯನ್ನು ಹೇಳುವಾಗ ಅದರ ದೊಡ್ಡತನವನ್ನು ಸೂಚಿಸದೇ, ಯಾವ ಬಿರುದಗಳಿಲ್ಲದೇ ಕರೆಯುವುದು ಭಾವ್ಯವಲ್ಲ. ಆದ್ದರಿಂದ ನಾವು ಈಗಿನಿಂದ ಭಗವದ್ಗೀತೆಯನ್ನು ನಿಜವಾದ ಭಾವದಿಂದ ಪರಮ, ಪವಿತ್ರ, ಪರಿಶುದ್ಧ ಭಗವದ್ಗೀತೆ ಎಂದು ಕರೆಯುತ್ತಿದ್ದೇವೆ. ಇದೇ ವಿಷಯವನ್ನೇ ಎಲ್ಲರಿಗೂ ತಿಳಿಸಿ ಎಲ್ಲರಿಂದ ಭಗವದ್ಗೀತೆಯನ್ನು ಪರಮ ಪವಿತ್ರ ಪರಿಶುದ್ಧ ಎನ್ನುವ ಬಿರುದುಗಳಿಂದಲೇ ಗೌರವಿಸೋಣ.

ಪರಮ ಪವಿತ್ರ ಪರಿಶುದ್ದ ಗ್ರಂಥವಾದ ಭಗವದ್ಗೀತೆ ಕೇವಲ ದೇವರ ಜ್ಞಾನವನ್ನು ಮಾತ್ರ ತಿಳಿಸುತ್ತಿದೆ. ಗೀತೆ ಯಾವ ಒಂದು ಮತಕ್ಕೂ ಸಂಬಂಧಿಸಿರುವುದು ಅಲ್ಲ. ಈಗ ಮನುಷ್ಯರ ಮಧ್ಯದಲ್ಲಿರುವ ಎಲ್ಲಾ ಮತಗಳ ಸಾರಾಂಶವು ಭಗವದ್ಗೀತೆಯಲ್ಲಿ ಇದೆ. ಗೀತೆ ಸಮಸ್ತ ಮಾನವರಿಗೂ ದೈವಸಂದೇಶವಾಗಿದೆ. ಗೀತೆಯಲ್ಲಿ ಹೇಳಿದ ಜ್ಞಾನ ಇಲ್ಲಿ ಬೈಬಲ್‌ನಲ್ಲಿಯೂ ಅಲ್ಲಿ ಖುರಾನ್‌ನಲ್ಲಿಯೂ ಕಾಣಿಸುತ್ತಿದೆ. ದೇವರಿಂದ ಎರಡು ಬಾರಿ ಹೇಳಲಾಗಿರುವುದು ಭಗವದ್ಗೀತೆ ಒಂದು ಮಾತ್ರವೆ. ಭಗವದ್ಗೀತೆಯಲ್ಲಿ ಎಷ್ಟು ಹುಡಿಕಿದರು ಜ್ಞಾನವೇ ಕಾಣಿಸುತ್ತದೆ. ಆದರೆ ಮತ ಸ್ವಲ್ಪವೂ ಕಾಣಿಸುವುದಿಲ್ಲ.

ಆದ್ದರಿಂದ ಗೀತೆಯನ್ನು ಮತಗಳಿಗೆ ಅತೀತವಾದುದೆಂದು ಹೇಳಬಹುದು. ಮುಖ್ಯವಾಗಿ ಹೇಳಿಕೊಂಡರೆ ಸೃಷ್ಟಿ ಆದಿಯಲ್ಲಿ ಸೂರ್ಯನು ಭಗವದ್ಗೀತೆಯನ್ನು ಕೇಳಿದಾಗ ಭೂಮಿಮೇಲೆ ಮತದ ಹೆಸರೇ ಇಲ್ಲದಂತಿತ್ತು. ನಂತರ ಸ್ವಲ್ಪ ಕಾಲಕ್ಕೆ ಮಾಯೆಯ ಪ್ರಭಾವದಿಂದ ಮತ ಎನ್ನುವುದು ಮಾನವರ ಮಧ್ಯದೊಳಗೆ ಬಂದು ಸೇರಿಹೋಗಿದೆ. ದೇವರ ಜ್ಞಾನವನ್ನು ವಿರುದ್ಧವಾಗಿ ಮಾಯೆ ತನ್ನ ಜ್ಞಾನವನ್ನು ದೇವರ ಜ್ಞಾನದಂತೆ ಪ್ರಚಾರ ಮಾಡಿ ಯಾವುದು ದೇವರ ಜ್ಞಾನವೋ, ಯಾವುದು ಮಾಯ ಜ್ಞಾನವೋ ಅರ್ಥವಾಗದಂತೆ ಮಾಡುತ್ತದೆ. ಅಂತಹ ಪರಿಸ್ಥಿತಿಗಳಲ್ಲಿ ದೈವಜ್ಞಾನದ ಮೇಲೆ ಆಸಕ್ತಿ ಇರುವವರೆಲ್ಲರೂ ದೇವರ ಜ್ಞಾನದಂತಿರುವ ಮಾಯ ಜ್ಞಾನವನ್ನು ದೈವಜ್ಞಾನವಾಗಿ ಲೆಕ್ಕಿಸಿ, ಅದನ್ನೇ ತಿಳಿದುಕೊಳ್ಳುವ ಅವಕಾಶ ಇದೆ. ಮಾನವರನ್ನು ದೇವರ ಕಡೆ ಹೋಗದಂತೆ ಮಾಡುವುದಕ್ಕೆ, ತನ್ನಕಡೆ ಬರುವುದಕ್ಕೆ ಮಾಯೆ ಎಷ್ಟೋ ಜನ ಸ್ವಾಮೀಜಿಗಳಿಂದ ತನ್ನ ಜ್ಞಾನವನ್ನು ಹೇಳಿಸುತ್ತದೆ. ಮಾಯೆ ತನ್ನ ಜ್ಞಾನವನ್ನು ಪ್ರಚಾರ ಮಾಡುವವರಿಗೆ ದೊಡ್ಡ ದೊಡ್ಡ ಬಿರುದುಗಳನ್ನು ಅತ್ತಗಟ್ಟಿ ಅವರನ್ನೇ ಪ್ರಜೆಗಳು ನಂಬುವಂತೆ ಮಾಡುತ್ತಿದೆ. ದೇವರು ತನ್ನ ಜ್ಞಾನವನ್ನು ತಿಳಿಸುವುದಕ್ಕೆ ಕೆಲವು ಸಾವಿರಾರು ವರ್ಷಗಳಿಗೊಂದು ಬಾರಿ ಭೂಮಿಮೇಲಕ್ಕೆ ಭಗವಂತನ ರೂಪದಲ್ಲಿ ಬರುತ್ತಿದ್ದಾನೆ. ಭಗವಂತನು ಒಬ್ಬನೇ ಭೂಮಿಮೇಲೆ ಜ್ಞಾನವನ್ನು ಹೇಳಿದರೆ ಮನುಷ್ಯರು ಅದನ್ನೇ ಕೇಳುವ ಅವಕಾಶ ಇರುವುದರಿಂದ ಆಗಲ್ಲದೆ ಮಾಯೆ ಭೂಮಿಮೇಲೆ ತನ್ನ ಜ್ಞಾನವನ್ನು ಹೇಳುವ ಅನೇಕ ಜನರಿಗೆ ಭಗವಾನ್ ಎಂದು ಅವರ ಹೆಸರು ಕೊನೆಯಲ್ಲಿ ಅಂಟಿಸಿದೆ. ಆದ್ದರಿಂದ ಭೂಮಿಮೇಲೆ ಎಲ್ಲಕಾಲದಲ್ಲಿ ಎಷ್ಟೋಜನ ಭಗವಾನ್‌ರು ತಮ್ಮ ತಮ್ಮ ಮಾಯೆಬೋಧನೆಗಳು ಹೇಳುತ್ತಲೇ ಇರುತ್ತಾರೆ. ಯಾವಾಗಲು ಭಗವಾನ್ ಎನ್ನುವ ಹೆಸರು ಇರುವವರು ಭೂಮಿಮೇಲೆ ಇರುವಾಗ ಸಾವಿರಾರು ವರ್ಷಗಳಿಗೊಂದು ಬಾರಿ ಬರುವ ಭಗವಂತನನ್ನು ಯಾರೂ ಗುರುತಿಸಲಾರರು, ಅಷ್ಟೇ ಅಲ್ಲದೆ ಆತನ ಜ್ಞಾನವನ್ನು ಸಹ ಪ್ರತ್ಯೇಕವಾಗಿ ಗುರುತಿಸಲಾರರು. ಆದ್ದರಿಂದ ಭೂಮಿಮೇಲೆ ಪ್ರಸ್ತುತ

ಇರುವ ಜ್ಞಾನಗಳಲ್ಲಿ, ಯಾವುದು ನಿಜವಾದ ದೈವಜ್ಞಾನವೋ ಗುರುತಿಸಲಾರದ ಪರಿಸ್ಥಿತಿಗಳಲ್ಲಿ ಮಾನವರಿದ್ದಾರೆ. ಈ ವಿಧವಾಗಿ ಮಾಯೆ ತನ್ನ ಜ್ಞಾನ ವಿಧಾನವನ್ನು ಮನುಷ್ಯರ ಮಧ್ಯದಲ್ಲಿ ಎಷ್ಟೋಜನ ಮನುಷ್ಯರನ್ನೇ ಗುರುಗಳಾಗಿ ಚಲಾವಣೆ ಮಾಡುತ್ತಾ ಅವರ ಮೂಲಕ ಪ್ರಚಾರ ಮಾಡಿಸುತ್ತಿದೆ.

ಮಾಯೆ ತನ್ನ ಜ್ಞಾನವನ್ನು ಮಾನವರ ಮಧ್ಯದೊಳಗೆ ಕಳುಹಿಸಿ ದೇವರ ಜ್ಞಾನವನ್ನು ಮರೆತುಹೋಗುವಂತೆ ಮಾಡುವುದಕ್ಕೆ ಮೊಟ್ಟಮೊದಲ ಆಯುಧವಾಗಿ **"ಮತ"** ಎನ್ನುವುದನ್ನು ಪ್ರವೇಶವಿಟ್ಟಿದೆ. ಮಾಯೆ ಮೊದಲು ಮತವನ್ನು ಯಾವ ವಿಧವಾಗಿ, ಎಷ್ಟು ಚಾಕಚಕ್ಯತೆಯಿಂದ ಭೂಮಿಮೇಲೆ ಪ್ರವೇಶ ಮಾಡಿಸಿದೆಯೋ ವಿವರವಾಗಿ ನೋಡೋಣ. ದೇವರು ಸೃಷ್ಟಿ ಆದಿಯಲ್ಲಿಯೇ ತನ್ನ ಜ್ಞಾನವನ್ನು ಸೂರ್ಯನ ಮೂಲಕ ಮನುಷ್ಯರ ಮಧ್ಯದೊಳಗೆ ಪ್ರವೇಶ ಮಾಡಿಸಿದ್ದಾನೆ. ಯಾವ ಮನುಷ್ಯನಾದರು ಇಲ್ಲವೇ ಯಾವ ಜೀವಿಯಾದರು ಮೋಕ್ಷವೆಂಬ ಗಮ್ಯವನ್ನು ಸೇರುವುದಕ್ಕೆ ನಾನು ಹೇಳಿದ ಮಾರ್ಗವನ್ನು ಬಿಟ್ಟರೆ ಬೇರೆ ಮಾರ್ಗವು ಇಲ್ಲವೆಂದು ತಿಳಿಸಿದ್ದಾನೆ. ಗಮ್ಯವಿದೆ ಅಂದರೆ ಅದಕ್ಕೊಂದು ಮಾರ್ಗವಿರಬೇಕು ತಾನೆ! ದೇವರನ್ನು ಸೇರುವುದಕ್ಕೆ, ಇಲ್ಲವೇ ಮೋಕ್ಷವನ್ನು ಸೇರುವುದಕ್ಕೆ ದೇವರಿಂದ ನಿರ್ಣಯಿಸಲ್ಪಟ್ಟಿರುವ ಮಾರ್ಗವೇ ಜ್ಞಾನಮಾರ್ಗವೆಂದು ಅನ್ನುತ್ತೇವೆ. **ಜ್ಞಾನಮಾರ್ಗವನ್ನು ಜ್ಞಾನಪಥ ಎಂದೂ ಸಹ ಅನ್ನುತ್ತೇವೆ. ಪಥ ಎಂದರೆ ಮಾರ್ಗ ಎಂದೇ ಅರ್ಥ**. ಪೂರ್ವದಲ್ಲಿ ಜ್ಞಾನಪಥ ಎನ್ನುವ ಮಾತನ್ನೇ ಪ್ರಜೆಗಳು ಹೆಚ್ಚಾಗಿ ಅಂದುಕೊಳ್ಳುತ್ತಿದ್ದರು. ಯಾವನಾದರೆ ದೈವ ಜ್ಞಾನವನ್ನು ಸಾಧಿಸುತ್ತಿದ್ದಾನೋ ಅವನನ್ನು ಜ್ಞಾನಪಥದಲ್ಲಿ ಇದ್ದಾನೆಂದು ಇತರರು ಹೇಳುತ್ತಿದ್ದರು. ಇತರ ಮತಗ್ರಂಥಗಳಲ್ಲಿಯೂ ಸಹ ಜ್ಞಾನಮಾರ್ಗವನ್ನು ಬಹಳ ಇರುಕಾದುದೆಂದು, ಮಾಯಮಾರ್ಗವು ಬಹಳ ವಿಶಾಲವಾದುದೆಂದೂ ಸಹ ಹೇಳಿದ್ದಾರೆ. ಗೀತೆಯಲ್ಲಿಯೂ ಸಹ ರಾಜವಿದ್ಯಾ ರಾಜಗುಹ್ಯಯೋಗವೆಂಬ ಅಧ್ಯಾಯದಲ್ಲಿ 23ನೇ ಶ್ಲೋಕದಲ್ಲಿ ಇತರ ದೇವತೆಗಳನ್ನು ಪೂಜಿಸುವವರು **ದಾರಿತಪ್ಪಿ** ನಡೆದವರಾಗುತ್ತಾರೆಂದೂ ಸಹ ಹೇಳಿದ್ದಾನೆ. ದೇವರು

ಜೀವಿಗೆ ಗಮ್ಯವಾದಾಗ ಆ ಗಮ್ಯವನ್ನು ಸೇರುವುದಕ್ಕೆ ತಪ್ಪದೆ ಮಾರ್ಗವು ಬೇಕು. ಆ ಮಾರ್ಗವನ್ನೇ ಜ್ಞಾನಪಥ ಎಂದು ಅನ್ನುತ್ತಿದ್ದರು. ಜ್ಞಾನ ಅನ್ನುವ ಪಥವನ್ನು ಕುರಿತು ಹೇಳಿಕೊಂಡರೆ ಜ್ಞಾನವು ಎರಡು ವಿಧಗಳಾಗಿ ಇದೆ. ಒಂದು ದೇವರ ಜ್ಞಾನ, ಎರಡನೆಯದು ಪ್ರಪಂಚಜ್ಞಾನ ಇವೆ. ಮಾರ್ಗ ಇಲ್ಲವೇ ಪಥ ಅನ್ನುವವು ಒಂದೇ ಅರ್ಥವನ್ನು ತಿಳಿಸಿದಾಗ ಜ್ಞಾನವು ಎರಡು ವಿಧಗಳಾಗಿ ಇದೆ ಆದ್ದರಿಂದ ದೇವರಜ್ಞಾನವನ್ನು, ಪ್ರಪಂಚಜ್ಞಾನವನ್ನು ಬೇರೆ ಬೇರೆಯಾಗಿ ಗುರುತಿಸುವುದಕ್ಕೆ ದೈವಜ್ಞಾನಕ್ಕೆ **"ಇಂದೂ"** ಅನ್ನುವ ಪದವನ್ನು ಬಳಸುತ್ತಿದ್ದರು. ಇಂದೂ ಅಂದರೆ ಚಂದ್ರನೆಂದು ಅರ್ಥ. ಜ್ಯೋತಿಷ್ಯಶಾಸ್ತ್ರದ ಪ್ರಕಾರ ಚಂದ್ರಗ್ರಹ ದೈವಜ್ಞಾನಕ್ಕೆ ಅಧಿಪತಿ, ಗುರುಗ್ರಹ ಪ್ರಪಂಚ ಜ್ಞಾನಕ್ಕೆ ಅಧಿಪತಿ. ಆದ್ದರಿಂದ ಇಲ್ಲಿ ದೈವಜ್ಞಾನವನ್ನು ಪ್ರತ್ಯೇಕವಾಗಿ ಗುರುತಿಸುವುದಕ್ಕೆ ದೈವಜ್ಞಾನಕ್ಕೆ ಅಧಿಪತಿಯಾದ ಚಂದ್ರನ ಹೆಸರನ್ನು ಜ್ಞಾನದ ಮುಂದೆ ಇಟ್ಟಿದ್ದಾರೆ. ಚಂದ್ರನನ್ನು ಇಂದೂ ಎನ್ನುವವರು ಅಂದಿದ್ದೇವೆ ತಾನೆ! ಜ್ಞಾನಪಥ (ಜ್ಞಾನಮಾರ್ಗ)ದಲ್ಲಿ ಇರುವವರನ್ನು ಇಂದೂಪಥದಲ್ಲಿ ಇದ್ದಾರೆಂದು ಹೇಳುತ್ತಿದ್ದರು. ಪೂರ್ವದಲ್ಲಿ ಇಂದೂಪಥ ಅನ್ನುವ ಮಾತೆ ಬಳಕೆಯಲ್ಲಿ ಇರುತ್ತಿತ್ತು. ಆ ದಿನದ ದೈವಜ್ಞಾನಿಗಳೆಲ್ಲರನ್ನು ಸೇರಿಸಿ ಇಂದೂ ಪಥದಲ್ಲಿನವರೆಂದು ಅನ್ನುತ್ತಿದ್ದರು.

ದೇವರಿಂದ ಸೃಷ್ಟಿಸಲ್ಪಟ್ಟು, ದೇವರಿಂದಲೆ ಶಕ್ತಿಯನ್ನು ಹೊಂದಿ, ದೇವರ ಆಜ್ಞೆಪ್ರಕಾರ ನಡೆದುಕೊಳ್ಳುವ ಮಾಯೆಗೆ ಇಲ್ಲಿಯೆ ದೊಡ್ಡ ಆಯುಧವು ದೊರೆತಿದೆ. **ಪಥ** ಅನ್ನುವ ಮಾತನ್ನು **ಮತ** ಅನ್ನುವ ಮಾತಾಗಿ ಮಾರ್ಪಡಿಸಿದೆ. ಮನುಷ್ಯರ ತಲೆಯಲ್ಲಿ ತಿಷ್ಟೆಹಾಕಿದ ಮಾಯೆ ಮಾನುಷ್ಯರಿಂದ ಪಥವನ್ನು ಮತವಾಗಿ ಹೇಳಿಸುವುದು ಮೊದಲುಮಾಡಿದೆ. ಈ ವಿಧವಾಗಿ ಮೊದಲು ತಯಾರಾದ ಮತವು ಎಲ್ಲರಲ್ಲಿಯೂ ವ್ಯಾಪಿಸಿ ಹೋಗಿ ಆ ದಿನ ಇಂದೂಪಥದಲ್ಲಿನವರೆಲ್ಲರನ್ನು ಇಂದೂಮತದಲ್ಲಿನವರಾಗಿ ಹೇಳಿಕೊಳ್ಳುವಂತೆ ಮಾಡಿದೆ. ಆ ದಿನ ಭಾರತದೇಶ ವೆಲ್ಲವೂ ದೈವಜ್ಞಾನಿಗಳೆ ಇರುತ್ತಿದ್ದರು, ಆದ್ದರಿಂದ ಭಾರತದೇಶಕ್ಕೆ ಇಂದೂದೇಶ ವೆಂದು ಹೆಸರು ಬಂದಿದೆ. ಆಗಿನಕಾಲದಲ್ಲಿ ಇಂದೂ ದೇಶದಲ್ಲಿರುವ ವರೆಲ್ಲರೂ

ಇಂದೂಮತದವರೆ ಎಂದು ಹೇಳಿಕೊಳ್ಳುತ್ತಿದ್ದರು. ಅಲ್ಲಿಂದ ಇಲ್ಲಿಯವರೆಗೂ ಪ್ರಪಂಚದಲ್ಲಿ ಮೊದಲಿನ ಇಂದೂದೇಶವಾಗಲಿ ಕೊನೆಯ ಇಂದೂದೇಶವಾಗಲಿ ಭಾರತದೇಶವೆಂದು ಹೇಳಬಹುದು. ಮಾಯೆಗೂ ಸಹ ಇಂದೂ ದೇಶದ ಮೇಲೆ ಹೆಚ್ಚಾಗಿ ಕಣ್ಣು ಇದೆ. ಆದ್ದರಿಂದ ಮೊದಲು ಇಂದೂದೇಶದಲ್ಲಿಯೆ ಮತ ಅನ್ನುವ ಆಯುಧವನ್ನು ಪ್ರಯೋಗಿಸಿದೆ. ಆ ಆಯುಧ ಬ್ರಹ್ಮಾಸ್ತ್ರದಂತೆ ಕೆಲಸಮಾಡಿ ಎಂತಹ ದೈವಜ್ಞಾನಿಯಿಂದಾದರು ಮತದ ಹೆಸರನ್ನೇ ಹೇಳಿಸುತ್ತಿದೆ. ಎಷ್ಟೋ ಚಾಕಚಕ್ಯವಾಗಿ ಪಥವನ್ನು ಮತವಾಗಿ ಮಾರ್ಪಡಿಸಿದ ಮಾಯೆ ಅಲ್ಲಿಗೆ ಸುಮ್ಮನಾಗದೆ ಮತ್ತೊಂದು ಆಯುಧವನ್ನು ಸಹ ಪ್ರಯೋಗಿಸಿದೆ. ಅದು ಏನೆಂದರೆ!

ಇಂದೂ ಅಂದರೆ ಚಂದ್ರನೆಂದು, ಚಂದ್ರನು ಅನ್ನುತ್ತಲೆ ದೈವಜ್ಞಾನವೆಂದು ತಿಳಿದುಹೋಗುತ್ತದೆ ಎಂದು, ಹಾಗೆ ದೈವಜ್ಞಾನದ ಹೆಸರು ಮತ ಅನ್ನುವ ಹೆಸರಿಗೆ ಮುಂದಿದ್ದರೆ ಎಂದಿಗಾದರು ಮತವನ್ನು ಪಥವಾಗಿ ಯಾರಾದರು ಮಾರ್ಪಡಿಸಿದರು ಇಂದೂಪಥವೆಂದು ಮತ್ತೆ ಮೊದಲಿನ ಹೆಸರೆ ಬರುತ್ತದೆ ಅಲ್ಲವೆಂದು ಯೋಚಿಸಿದ ಮಾಯ ಮತದ ಮುಂದೆ ಇಂದೂ ಅನ್ನುವ ಪದವನ್ನು ತೆಗೆದುಹಾಕಬೇಕೆಂದುಕೊಂಡಿದೆ. ಪಥವನ್ನು ಸುಲಭವಾಗಿ ಮತವಾಗಿ ಮಾರ್ಪಡಿಸಿದ ಮಾಯೆ, ಇಂದೂ ಅನ್ನುವ ಪದ ಸುಲಭವಾಗಿಯೇ ಹಿಂದು ಅನ್ನುವ ಪದವಾಗಿ ಮಾರ್ಪಡಿಸಿದೆ ಎಂದು. ಆದ್ದರಿಂದ ಇಂದೂಪಥವು ಪೂರ್ತಿ ಹಿಂದೂಮತ ವಾಗಿ ಬದಲಾವಣೆಯಾಗಿದೆ ಎಂದು. **ಇಂದೂ ಅನ್ನುವುದು ಹಿಂದುವಾಗಿ, ಪಥ ಅನ್ನುವುದು ಮತವಾಗಿ ಬದಲಾವಣೆ ಯಾಗುವುದರಿಂದ ಎಲ್ಲರೂ ಹಿಂದೂಮತವೆಂದೇ ಅಂದುಕೊಳ್ಳುತ್ತಿದ್ದಾರೆ.** ಇಂದೂಪಥದಿಂದ ಹಿಂದೂಮತದೊಳಗೆ ಮನುಷ್ಯರನ್ನು ಮಾರ್ಪಡಿಸಿದ ಮಾಯೆ, ಮನುಷ್ಯರಲ್ಲಿ ದೈವಜ್ಞಾನವನ್ನು ಇಲ್ಲದಂತೆ ಮಾಡಿ ತನ್ನ ಜ್ಞಾನವನ್ನು ದೈವಜ್ಞಾನದಂತೆ ತಿಳಿಯುವಂತೆ ಮಾಡಿದೆ. ಆದ್ದರಿಂದ ಈದಿನ ಪ್ರಜೆಗಳಲ್ಲಿ ಭಕ್ತಿ ಜ್ಞಾನ ಇದೆ ಅಂದರೆ ಅದು ಹೆಚ್ಚಾಗಿ ಮಾಯೆಗೆ ಸಂಬಂಧಿಸಿರುವುದೆ

ಆಗಿರುತ್ತದೆ. ಹಿಂದೂಮತವು 98% ರಷ್ಟು ಮಾಯಜ್ಞಾನದಲ್ಲಿ ಕೂರಿಕೊಂಡು ಹೋಗಿದೆ ಎಂದು ಹೇಳಬಹುದು. ಕೆಲವು ಇತರ ಮತಗಳಲ್ಲಿ ಸ್ವಲ್ಪಮಟ್ಟಿಗೆ ನಿಜವಾದ ದೈವಜ್ಞಾನ ಇದ್ದಲ್ಲಿಯೂ ಮಾಯೆ ಅಲ್ಲಿರುವವರನ್ನೂ ಸಹ ತನ್ನಕಡೆ ಸೆಳೆದುಕೊಳ್ಳುವುದಕ್ಕೆ ನೋಡುತ್ತಿದೆ. ಆದಲ್ಲಿಯೂ ಹಿಂದೂಮತಕ್ಕಿಂತ ಇತರೆ ಮತಗಳೇ ಸ್ವಲ್ಪ ಸಕ್ರಮಮಾರ್ಗದಲ್ಲಿ ಇವೆಯೆಂದು ಹೇಳಿಕೊಳ್ಳಬಹುದು. ಏಕೆಂದರೆ ಪ್ರಸ್ತುತ ಹಿಂದೂಮತ ದೇವರ ವಿಷಯದಲ್ಲಿ ಬಹಳ ಇಳಿಜಾರಿಹೋಗಿದೆಂದು ಹೇಳುವುದಕ್ಕೆ ಎಷ್ಟೋ ತಾರ್ಕಾಣಗಳು ಇವೆ.

ಮುಖ್ಯವಾಗಿರುವ ಹಿಂದು, ಇಸ್ಲಾಮ್, ಕ್ರೈಸ್ತವ ಅನ್ನುವ ಮೂರು ಪಥಗಳು ಅವವುಗಳ ಹೆಸರುಗಳಿಂದಲ್ಲದೆ ಮತಗಳ ಹೆಸರಿನಿಂದಲೇ ಇವೆ. ಮೂರು ಮತಗಳಲ್ಲಿಯೂ ಅಸಲಾದ ಒಂದೇ ದೇವರ ಜ್ಞಾನವೇ ಇದ್ದಲ್ಲಿಯೂ ಮಾಯೆಯೊಂದರ ಮತದ ಪ್ರಭಾವದಿಂದ ಎಲ್ಲಾ ಮತಗಳಲ್ಲಿಯೂ ಒಂದೇ ದೇವರನ್ನು ಕುರಿತು ಹೇಳಿದ್ದಾರೆಂದು ಮನುಷ್ಯರಿಗೆ ತಿಳಿಯದಂತೆಹೋಗಿದೆ. ಕ್ರೈಸ್ತರು ನಮ್ಮ ದೇವರು **"ಯೆಹೋವಾ"** ಎಂದು ಅನ್ನುತ್ತಾರೆ. ಮುಸ್ಲೀಮರು ನಮ್ಮ ದೇವರು **"ಅಲ್ಲಾ"** ಅನ್ನುತ್ತಾರೆ. ಹಿಂದುಗಳು ವಿಷಯಕ್ಕೆ ಬಂದರೆ ಅವರ ದೇವರು ಯಾರೋ ಸಹ ಅವರಿಗೆ ತಿಳಿಯದ ಸ್ಥಿತಿಯಲ್ಲಿ ಇದ್ದಾರೆ. ಮತ ಅನ್ನುವ ಮಾಯೆ ಎಲ್ಲರಿಗೂ ಒಂದೇ ದೇವರೆಂದು, ಎಲ್ಲರನ್ನು ಸೃಷ್ಟಿಸಿದವನು ಒಬ್ಬನೇ ಎಂದು, ಸೃಷ್ಟಿ ಮೊದಲಿನಿಂದ ಕೊನೆಯವರೆಗೂ ಜಗತ್ತಿಗೆಲ್ಲವು ಒಬ್ಬನೇ ಅಧಿಪತಿಯೆಂದು, ಆತನೇ ದೇವರೆಂದು ತಿಳಿಯದಂತೆ ಮಾಡಿದೆ. ನಮ್ಮ ದೇವರು ಅವರ ದೇವರಿಗಿಂತ ದೊಡ್ಡವನು ಎಂಬ ಭಾವನೆಯನ್ನು ಎಲ್ಲಾ ಮತಗಳಲ್ಲಿಯೂ ಮಾಯೆ ಹೇಳುವಂತೆ ಮಾಡಿದೆ. ಹಾಗೆ ಅಂದುಕೊಳ್ಳುವುದೇ ದೊಡ್ಡ ಮಾಯೆ ಎಂದು ಯಾರೂ ಅಂದುಕೊಳ್ಳುತ್ತಿಲ್ಲ. ಅಷ್ಟೇ ಅಲ್ಲದೆ ಮಾಯೆ ಮತ್ತೊಂದು ಭಾವವನ್ನು ಸಹ ಮನುಷ್ಯರಲ್ಲಿ ಇರುವಂತೆ ಮಾಡಿದೆ. ಅದು ಏನೆಂದರೆ! ನಾವು ಕ್ರೈಸ್ತರು ಅನ್ನುವವರು ಬೈಬಲ್‌ನ್ನು ಕುರಿತು ಮಾತನಾಡಿದರು, ಪ್ರಭುವನ್ನು ಕುರಿತು ಮಾತನಾಡಿದರು ಸಂತೋಷವಾಗಿ ಕೇಳುತ್ತಾರೆ. ಅದೇ ಹಿಂದೂಮತ

ದಲ್ಲಿನ ಭಗವದ್ಗೀತೆಯನ್ನು ಕುರಿತು ಮಾತನಾಡಿದರು, ಶ್ರೀಕೃಷ್ಣನನ್ನು ಕುರಿತು ಮಾತನಾಡಿದರು ಬೇಸರಗೊಂಡು ಕೇಳುವುದಿಲ್ಲ. ಕೇಳದಿರುವುದಲ್ಲದೆ ಶ್ರೀಕೃಷ್ಣನ ಬಗ್ಗೆ ಭಗವದ್ಗೀತೆಯನ್ನು ಕುರಿತು ವಿರುದ್ಧವಾಗಿ ಮಾತನಾಡುತ್ತಾರೆ. ಹಾಗೆ ಅವರು ಪ್ರವರ್ತಿಸುವುದಕ್ಕೆ ಮುಖ್ಯವಾದ ಕಾರಣ ಏನೆಂದರೆ, ಮಾಯೆ ಮತವೆನ್ನುವ ಮುಸುಗನ್ನು ಅವರಿಗೆ ತಗಲಿಸಿ ದೇವರನ್ನು, ದೇವರ ಜ್ಞಾನವನ್ನು ಪರಿಮಿತಿ ಮಾಡಿ ತೋರಿಸುತ್ತಿದೆ. ಆದ್ದರಿಂದ ದೇವರು ಪೂರ್ವದಿಂದ ಇದ್ದಾನೆಂದು, ಆತನು ಕಲಿಯುಗದಲ್ಲಿ ಪ್ರಭುವಿನರೂಪದಲ್ಲಿ ಬಂದಂತೆ ಇತರ ಯುಗಗಳಲ್ಲಿ, ಇತರ ರೂಪಗಳಲ್ಲಿ ಬಂದಿರುತ್ತಾನೆಂದು, ಬೈಬಲ್‌ನಲ್ಲಿ ದೇವರು ಪ್ರಭುರೂಪದಲ್ಲಿ ಹೇಳಿದಂತೆ ಗೀತೆಯಲ್ಲಿಯೂ ಸಹ ದೇವರು ಹೇಳಿರುತ್ತಾನೇನೋ ಎಂದು ಯೋಚಿಸದಂತೆ ಮಾಡುತ್ತಿದೆ. ತಾನು ನಿರ್ಮಿಸಿದ ಮತವೆಂಬ ಪರಿಧಿಯನ್ನು ದಾಟಿಹೋಗಿ ವಿಶಾಲವಾಗಿರುವ ದೇವರನ್ನು ಮಾನವರು ತಿಳಿದುಕೊಳ್ಳುತ್ತಾರೇನೋ ಎಂದು ಮಾಯೆಗೆ ದಿಗಿಲು. ಆದ್ದರಿಂದ ಮಾಯ ಪ್ರಭಾವ ಇರುವವರು ನಾವು ಇತರ ಮತಗಳ ಪುಸ್ತಕಗಳು ಓದುವುದಿಲ್ಲ, ಇತರ ಬೋಧನೆಗಳು ಕೇಳುವುದಿಲ್ಲ ಅನ್ನುತ್ತಿರುತ್ತಾರೆ. ನಿಜವಾಗಲು ಗಂಡನನ್ನು ಪ್ರೀತಿಸುವ ಹೆಂಡತಿ ಹೊರಗೆ ಇತರ ಪುರುಷನನ್ನು ನೋಡಿದರು ಗಂಡನನ್ನು ಬಿಟ್ಟು ಅವನ ಹಿಂದೆ ಹೋಗುವುದಿಲ್ಲ ಅಲ್ಲವೆ! ಅಂತಹದರಲ್ಲಿ ಯಾವ ಮತದಲ್ಲಿರುವವರಾದರು ಅವರ ಮತದಲ್ಲಿನ ದೇವರ ಮೇಲೆ ಪೂರ್ತಿಯಾಗಿ ವಿಶ್ವಾಸ ಇದ್ದರೆ ಇತರ ಮತಗಳ ಪುಸ್ತಕಗಳು ಓದಿದರು, ಬೋಧನೆಗಳು ಕೇಳಿದರು ಅವರ ದೇವರನ್ನು ಬಿಡುವುದಿಲ್ಲ ಅಲ್ಲವೆ! ತನ್ನ ಗಂಡನ ಮೇಲೆ ನಂಬಿಕೆಯಿಲ್ಲದ ಹೆಂಡತಿ ಇತರ ಪುರುಷನನ್ನು ನೋಡಿದರೆ ತಾನೆಲ್ಲಿ ತನ್ನಗಂಡನನ್ನು ಬಿಟ್ಟುಹೋಗುತ್ತೇನೋ ಎಂದು ಭಯ ಇರುವಾಗ ಇತರರನ್ನು ನೋಡದಂತೆ ಜಾಗ್ರತೆ ಬೀಳುತ್ತಾಳೆ. ಹಾಗೆಯೇ ತನ್ನ ದೇವರ ಮೇಲೆ ವಿಶ್ವಾಸವಿಲ್ಲದ ಮನುಷ್ಯ ಇತರ ಮತಗಳ ಪುಸ್ತಕಗಳನ್ನು ಓದಿದರು, ಬೋಧನೆಗಳು ಕೇಳಿದರು ತನ್ನ ದೇವರನ್ನು, ತನ್ನ ಮತವನ್ನು ಬಿಟ್ಟುಹೋಗುತ್ತೇನೆಂದು ಭಯಪಡುತ್ತಿರುತ್ತಾರೆ.

ಆದ್ದರಿಂದ ಅಂತಹವರು ಇತರ ಮತಗ್ರಂಥಗಳನ್ನು ಇತರ ಬೋಧನೆಗಳನ್ನು ಕೇಳುವುದಿಲ್ಲ, ಓದುವುದಿಲ್ಲ.

ಇನ್ನೂ ಹಿಂದೂಮತದೊಳಗಿರುವವರನ್ನು ನೋಡಿದರೆ ಅವರು ಒಬ್ಬ ದೇವರನ್ನು ಅಲ್ಲದೆ ಎಷ್ಟೋಜನ ದೇವರಲ್ಲದ ದೇವರುಗಳನ್ನು ಅವರೇ ಸೃಷ್ಟಿಸಿಕೊಂಡು ಇಷ್ಟದೇವರು, ಮನೆದೇವರು, ಕುಲದೇವರೆಂದು ವಿಧವಿಧ ದೇವರುಗಳನ್ನು ಆರಾಧಿಸುತ್ತಿದ್ದಾರೆ. ಒಬ್ಬ ದೇವರನ್ನು ಅಲ್ಲದೆ ಎಷ್ಟೋಜನ ದೇವರುಗಳಿಗೆ ಅಭ್ಯಾಸವಾದವರು, ಆದ ಕಾರಣ ಇತರ ಮತದೊಳಗಿನ ದೇವರ ಮೇಲೆ ಸಹ ಇವರಿಗೆ ದೊಡ್ಡ ಅಸೂಯೆ ಭಾವನೆ ಇರುವುದಿಲ್ಲ. ಆದ್ದರಿಂದ ಕ್ರೈಸ್ತರು ಪುಸ್ತಕಗಳು ಕೊಟ್ಟರು ಅವುಗಳನ್ನು ಓದುತ್ತಿದ್ದಾರೆ. ಅವರ ಬೋಧನೆಗಳು ಹೇಳಿದರು ಕೇಳುತ್ತಿದ್ದಾರೆ. ಎಷ್ಟೋಜನ ಹಿಂದೂಮತವನ್ನು ಬಿಟ್ಟು ಕ್ರೈಸ್ತಮತ ದೊಳಗೆ ಹೋದವರು ಸಹ ಇದ್ದಾರೆ. ಇದೆಲ್ಲವೂ ಗಮನಿ ಸುತ್ತಿರುವ ಹಿಂದೂಮತ ಗುರುಗಳು, ಸ್ವಾಮಿಗಳು, ಪೀಠಾಧಿಪತಿಗಳು ತಾವು ಹೇಳಿದ ಬೋಧನೆಗಳೆ ಕೇಳಬೇಕು, ತಾವು ಬರೆದ ಗ್ರಂಥಗಳೇ ಓದಬೇಕು ಎಂದು ತಮ್ಮ ವರ್ಗದವರಿಗೆ ಬೋಧಿಸುವುದು ಪ್ರಾರಂಭಿಸಿದ್ದಾರೆ. ಹಿಂದೂ ಮತದಲ್ಲಿ ಅದ್ವೈತ, ವಿಶಿಷ್ಠಾದ್ವೈತ, ದ್ವೈತ ಅನ್ನುವ ಸೀಳಿಕೆಗಳಿರುವುದಲ್ಲದೆ ಅಚಲ ಸಮಾಜವೆಂದು, ಬ್ರಹ್ಮಕುಮಾರಿ ಸಮಾಜವೆಂದು, ಸಿದ್ಧಯೋಗ ಸಮಾಜ ವೆಂದು, ಪಿರಿಮಿಡ್ ಸಮಾಜವೆಂದು ಬಹಳ ವಿಧಗಳ ಸೀಳಿಕೆಗಳು ಇವೆ. ಹಿಂದೂಮತದಲ್ಲಿ ಅವರವರ ಸಮಾಜವನ್ನು ಬಲಪಡಿಸಿಕೊಳ್ಳುವುದಕ್ಕೆ, ಅವರ ಸಮಾಜ ದೊಳಗಿನವರು ಇತರ ಸಮಾಜದೊಳಗೆ ಹೋಗುತ್ತಾರೇನೋ ಎಂಬ ಭಯದಿಂದ ಇಂದೂಮತದಲ್ಲಿಯೇ ಇತರರು ಬರೆದ ಪುಸ್ತಕಗಳು ಓದಬಾರ ದೆಂದು ತಾವು ಬರೆದ ಪುಸ್ತಕಗಳು ಮಾತ್ರವೇ ಓದಬೇಕೆಂದು ನಿಬಂಧನೆಗಳನ್ನು ಇಟ್ಟಿರುತ್ತಾರೆ. ಇದು ಹೇಗಿದೆ ಎಂದರೆ ತಾನು ಅಂದಹೀನನಾಗಿರುವವನು ತನ್ನ ಹೆಂಡತಿ ತನಗಿಂತ ಅಂದವಾಗಿರುವ ವನನ್ನು ನೋಡಿದರೆ ತನ್ನನ್ನು ಎಲ್ಲಿ ಬಿಟ್ಟುಹೋಗುತ್ತಾಳೋ ಎಂಬ ಭಯದಿಂದ ನೀನು ಇತರರ ಕಡೆ ನೋಡಬೇಡ

ಎಂದು ತನ್ನ ಹೆಂಡತಿಯನ್ನು ಆಜ್ಞಾಪಿಸಿದಂತೆ ಕೆಲವು ಗುರುಗಳು, ಸ್ವಾಮಿಗಳು ತಮ್ಮ ಭಕ್ತರಿಗೆ, ಶಿಷ್ಯರಿಗೆ ಇತರ ಪುಸ್ತಕಗಳನ್ನು ಓದಬೇಡವೆಂದು, ಇತರ ಬೋಧನೆಗಳು ಕೇಳಬೇಡವೆಂದು ಆಜ್ಞಾಪಿಸುತ್ತಿದ್ದಾರೆ. ಇಂತಹ ನನ್ನ ಮತ ಅನ್ನುವ ಸಂಕುಚಿತ ಭಾವನೆಗಳು, ನನ್ನ ಜ್ಞಾನ ಅನ್ನುವ ಸ್ವಾರ್ಥಭಾವನೆಗಳು ಮತಗಳಲ್ಲಿಯೂ, ಭಕ್ತಿ ಸಮಾಜದಲ್ಲಿಯೂ ಬೆಳೆದುಹೋಗಿವೆ. ಕ್ರೈಸ್ತರು ಕೊಟ್ಟಿರುವ ಪುಸ್ತಕಗಳನ್ನು ಹಿಂದೂಗಳು ನಿರಾಟಂಕವಾಗಿ ತೆಗೆದುಕೊಳ್ಳುತ್ತಿದ್ದಾರೆ. ನೀವು ಕೊಟ್ಟ ಪುಸ್ತಕಗಳು ನಾವು ತೆಗೆದುಕೊಳ್ಳುವು ದಿಲ್ಲವೆಂದು, ನಾವು ಓದುವುದಿಲ್ಲ ಎಂದು ಹಿಂದೂಗಳು ಅನ್ನುತ್ತಿಲ್ಲವೇ. ಆದರೆ ಒಬ್ಬ ಹಿಂದೂ ಹಿಂದೂಮತಕ್ಕೆ ಸಂಬಂಧಿಸಿದ ಪುಸ್ತಕವನ್ನು ಕ್ರೈಸ್ತರಿಗೆ ಕೊಟ್ಟರೆ ಕ್ರೈಸ್ತರು **"ನೀವು ಕೊಟ್ಟ ಪುಸ್ತಕವನ್ನು ನಮಗೆ ಬೇಡವೆಂದು"** ನಿರಾಕರಿಸುತ್ತಾ ಮುಖಾಮುಖಿ ಹೇಳುತ್ತಿದ್ದಾರೆ. ಇದೆಲ್ಲ ಮಾಯೆಯ ಮತ ಪ್ರಭಾವವು ತಾನೆ?

ವಿಶ್ವವೆಲ್ಲವನ್ನು ಸೃಷ್ಟಿಸಿದ ದೇವರು, ವಿಶ್ವವೆಲ್ಲವನ್ನೂ ಅಂತ್ಯ ಮಾಡುವ ದೇವರು, ವಿಶ್ವದಲ್ಲಿನ ಮಾನವರಿಗೆಲ್ಲರಿಗೂ ಅಧಿಪತಿಯಾದ ದೇವರು, ಎಲ್ಲಾ ಮತಗಳಲ್ಲಿಯೂ ನಾಯಕನಾಗಿರುವ ದೇವರು ಸೃಷ್ಟಿಸಿರುವವೇ ಮತಗ್ರಂಥ (ಪಥಗ್ರಂಥ)ಗಳಾದ ಭಗವದ್ಗೀತೆ, ಬೈಬಲ್, ಖುರಾನ್‌ಗಳು. ದೇವರು ತಿಳಿಸಿರುವ ಜ್ಞಾನಸಮಾಚಾರ ಆ ಮೂರು ಗ್ರಂಥಗಳಲ್ಲಿ ಇದೆ. ಆದರೆ ದೇವರು ತಿಳಿಸಿದ ಜ್ಞಾನವನ್ನು ಸಹ ಮನುಷ್ಯರಿಗೆ ಅರ್ಥವಾಗದಂತೆ ಮಾಡುವುದೇ ಮಾಯೆಯ ಕೆಲಸ. ಗ್ರಂಥಗಳಲ್ಲಿಯೂ ಸಹ ತನ್ನ ಛಾಯೆಯನ್ನು ತೋರಿಸಿಕೊಳ್ಳುವುದು ಮಾಯೆಯೊಂದರ ಚಾಕಚಕ್ಯ. ಉದಾಹರಣೆಗೆ ಭಗವದ್ಗೀತೆಯನ್ನು ತೆಗೆದು ಕೊಂಡರೆ ದೇವರು ಹೇಳಿದ ಬಹಳ ಶ್ಲೋಕಗಳನ್ನು ಮಾಯೆ ಮನುಷ್ಯರಿಗೆ ಅರ್ಥವಾಗದಂತೆ ಮಾಡಿದೆ. ಸಂಸ್ಕೃತ ಶ್ಲೋಕಗಳಿಗೆ ಮಾಯೆ ವಿವರ ಹೇಳಿದ ಮನುಷ್ಯರಿಗೆ ಸ್ವಾಮಿಗಳಿಂದಲೆ ತಪ್ಪಾದ ವಿವರವನ್ನು ಬರೆಸಿದೆ. ಎಲ್ಲಿಯಿಲ್ಲದ ಸ್ವರ್ಗ ನರಕ ಲೋಕಗಳು ಪ್ರತ್ಯೇಕವಾಗಿ ಇವೆಯೆಂದು ನಂಬಿಸಿದೆ. ಒಟ್ಟಿಗೆ ದೇವರು ಹೇಳಿದ ಭಾವವನ್ನು ಕೇವಲ ಐದು ಶಾತವು ಸಹ ಅರ್ಥವಾಗದಂತೆ

ಮಾಡಿದೆ. ಬಹಳಕಡೆ ಭಗವದ್ಗೀತೆಯಲ್ಲಿ ದೇವರು ಹೇಳಿದ ಉದ್ದೇಶಕ್ಕೆ ವಿರುದ್ಧ ಭಾವನೆಗಳನ್ನು ದೇವರು ಹೇಳಿದಂತೆ ನಂಬಿಸಿದೆ. ಆದ್ದರಿಂದ ಹಿಂದೂಮತದಲ್ಲಿ ಭಗವದ್ಗೀತೆ ಈಗಲೂ ಪೂರ್ತಿ ಭಾವಸಹಿತವಾಗಿ ಇಲ್ಲದಂತೆ ಭಾವರಹಿತವಾಗಿ ಇದೆಯೆಂದೇ ಹೇಳಬಹುದು.

ಇನ್ನೂ ಬೈಬಲ್ ವಿಷಯಕ್ಕೆ ಬಂದರೆ ಅದರಲ್ಲಿ ಮಾಯೆ, ದೇವರ ಮಾತುಗಳನ್ನು ಮನುಷ್ಯರ ಮಾತುಗಳನ್ನು ಮಿಳಿತಮಾಡಿದೆ. ದೇವರ ಮಾತನ್ನು ಮನುಷ್ಯರ ಮಾತುಗಳನ್ನು ಸಮಾನವಾಗಿ ಲೆಕ್ಕಿಸಿಕೊಳ್ಳುವಂತೆ ಮಾಡಿದೆ. ಇದು ಪ್ರತ್ಯೇಕವಾದ ದೇವರ ಮಾತು ಅಲ್ಲವೆ ಎಂದು ಗುರುತಿಸದಂತೆ ಮನುಷ್ಯರ ಮಾತುಗಳನ್ನು ಒಪ್ಪಿಸಿದೆ. ಬೈಬಲಿನಲ್ಲಿನ ಎಲ್ಲಾ ವಾಕ್ಯಗಳು ಮುಖ್ಯವೇ ಅನ್ನುವಂತೆ ಅದರಲ್ಲಿನ ಒಂದು ಪಾಲು ಸಹ ತೆಗೆದುಹಾಕಬಾರದೆಂದು ಮನುಷ್ಯರನ್ನು ಶಾಸಿಸಿದೆ. ಆದ್ದರಿಂದ ಕ್ರೈಸ್ತರು ಬೈಬಲ್‌ನಲ್ಲಿನ ದೇವರ ವಾಕ್ಯಗಳನ್ನು ಮಾತ್ರ ಗುರುತಿಸದೆ ಪ್ರತಿವಾಕ್ಯವು ಮುಖ್ಯವೇ ಅಂದುಕೊಳ್ಳುತ್ತಿದ್ದಾರೆ. ತಮಗೆ ತಿಳಿಯದೆಯೆ ದೇವರ ವಾಕ್ಯಕ್ಕೆ ವಿರುದ್ಧವಾದ ಭಾವನೆಗಳನ್ನು ತಮ್ಮಲ್ಲಿ ಇಟ್ಟುಕೊಳ್ಳುತ್ತಿದ್ದಾರೆ. ದೇವರು ಹೇಳಿದ ಭಾವನೆಗೆ ಕೆಲವರು ಯಾವ ವಿಧವಾಗಿ ವಿರುದ್ಧವಾಗಿದ್ದಾರೋ ಎರಡು ಉದಾಹರಣೆಗಳನ್ನು ತೆಗೆದುಕೊಂಡು ನೋಡೋಣ. ಬೈಬಲ್‌ನನ್ನು ಓದಿದ ಕ್ರೈಸ್ತರು ಮನುಷ್ಯನಿಗೆ ಒಂದೇ ಜನ್ಮವಿದೆ, ಸತ್ತ ನಂತರ ಯಾರು ಹುಟ್ಟುವುದಿಲ್ಲವೆಂದು, ಪುನರ್ಜನ್ಮ ಇಲ್ಲವೆಂದು ಅನ್ನುತ್ತಿದ್ದಾರೆ. ಅದು ನಿಜವೇ ಎಂದು ಬಹಳಜನರು ನಂಬುತ್ತಿದ್ದಾರೆ. ಈ ಮಾತು ದೇವರ ಮಾತಿಗೆ ವಿರುದ್ಧವಾದುದೆಂದು ಯಾರು ಯೋಚಿಸಲಿಲ್ಲ. ದೇವರಿಗೆ ವಿರುದ್ಧವಾದ ಆ ವಿಷಯವನ್ನು ವಿವರಿಸಿಕೊಳ್ಳೋಣ. ಬೈಬಲ್ ಹೊಸ ನಿಬಂಧನೆಯಲ್ಲಿ ಮತ್ತಾಯಿ ಸುವಾರ್ತ 12ನೇ ಅಧ್ಯಾಯದಲ್ಲಿ 32ನೇ ವಾಕ್ಯದಲ್ಲಿ ಈ ವಿಧವಾಗಿ ಇದೆ. **"ಮನುಷ್ಯ ಕುಮಾರನಿಗೆ ವಿರೋಧವಾಗಿ ಮಾತನಾಡುವವನಿಗೆ ಪಾಪಕ್ಷಮಾಪಣೆ ಇದೆಯಾಗಲಿ, ಪರಿಶುದ್ಧಾತ್ಮನಿಗೆ ವಿರೋಧವಾಗಿ ಮಾತನಾಡುವವನಿಗೆ ಈಯುಗದಲ್ಲಾದರೂ ಬರುವ ಯುಗದಲ್ಲಾದರೂ ಪಾಪ ಕ್ಷಮಾಪಣೆ ಇಲ್ಲ."** ಈ

ವಾಕ್ಯವನ್ನು ಬಿಡಿಸಿ ನೋಡಿದರೆ ಒಬ್ಬರು ದೇವರ ಕುಮಾರನು, ಮತ್ತೊಬ್ಬರು ಪರಿಶುದ್ಧಾತ್ಮ, ಮೂರನೆಯವನು ವಿರೋಧವಾಗಿ ಮಾತನಾಡುವವನು. ಈ ಮೂವರಲ್ಲಿ ಎಂದಿಗೂ ಸರ್ವವು ಅಣುಅಣುವಿನಲ್ಲಿ ವ್ಯಾಪಿಸಿ, ಎಲ್ಲರಿಗೂ ಸಾಕ್ಷಿಯಾಗಿರುವ ಪರಮಾತ್ಮನೇ ಪರಿಶುದ್ದಾತ್ಮ ಇಲ್ಲವೆ ದೇವರು. ದೇವರಿಗೆ ಅಪರಿಶುದ್ಧವಾದ ಪಾಪವು ಅಂಟುವುದಿಲ್ಲವಾದ್ದರಿಂದ ಆತನನ್ನು ಪರಿಶುದ್ಧಾತ್ಮ ಅನ್ನುತ್ತಿದ್ದೇವೆ. ಪರಿಶುದ್ಧಾತ್ಮನಿಗೆ ಆಕಾರವಿಲ್ಲ, ಆಕಾರ ಇಲ್ಲದವನಿಗೆ ಹೆಸರು ಸಹ ಇರುವುದಿಲ್ಲ. ಆದ್ದರಿಂದ ಆತನನ್ನು ರೂಪನಾಮಗಳು ಇಲ್ಲದವನೆಂದು ಸಹ ಅನ್ನುತ್ತಿದ್ದೇವೆ. ರೂಪ, ಹೆಸರು ಇಲ್ಲದ ದೇವರು, ಎಲ್ಲಕಡೆ ವ್ಯಾಪಿಸಿರುವ ದೇವರು, ತನ್ನ ವಿಷಯವನ್ನು ಪ್ರಜೆಗಳಿಗೆ ಹೇಳುವುದಕ್ಕೆ ತನ್ನ ವ್ಯಾಪಕದಿಂದ ಒಂದು ಭಾಗವನ್ನು ಮನುಷ್ಯನಾಗಿ ಹುಟ್ಟಿಸಿ ಮನುಷ್ಯರಜೊತೆ ಮಾತನಾಡುತ್ತಾನೆ. ದೇವರೆ ಸ್ವತಃ ತನ್ನ ಕೋಟ್ಯಾದಿ ಅಂಶಗಳಲ್ಲಿ ಒಂದು ಅಂಶದಿಂದ ಹುಟ್ಟುತ್ತಿದ್ದಾನೆ ಆದ್ದರಿಂದ ಆತನನ್ನು ಮನುಷ್ಯಕುಮಾರನು ಎಂದು ಬೈಬಿಲ್‌ನಲ್ಲಿ, ಭಗವಂತನೆಂದು ಭಗವದ್ಗೀತೆಯಲ್ಲಿ ಅನ್ನುತ್ತಿದ್ದಾರೆ. ದೇವರ ಒಂದು ಭಾವವನ್ನು ದೇವರ ಕುಮಾರನೆಂದು, ಕೋಟ್ಯಾದಿ ಭಾಗಗಳನ್ನು ಪರಿಶುದ್ದಾತ್ಮ ಎಂದು ಅನ್ನುತ್ತಿದ್ದೇವೆ. ಪರಿಶುದ್ದಾತ್ಮ ಎಲ್ಲವೇಳೆಯಲ್ಲಿ ವಿಶ್ವವೆಲ್ಲವೂ ವ್ಯಾಪಿಸಿರುವಾಗ, ದೇವರ ಕುಮಾರನು ಮಾತ್ರ ಭೂಮಿಮೇಲೆ ಕೆಲವು ಸಾವಿರ ವರ್ಷಗಳಿಗೊಂದು ಬಾರಿ ಹುಟ್ಟುತ್ತಿದ್ದಾನೆ. ಮಾಯಪ್ರಭಾವದಿಂದ ಭೂಮಿ ಮೇಲೆ ಅಧರ್ಮಗಳು ಹೆಚ್ಚಾದಾಗ ದೇವರ ಧರ್ಮಗಳು ತಿಳಿಯದೇ ಹೋಗಿರುವಾಗ ದೇವರ ಸಂಕಲ್ಪದಿಂದ ದೇವರ ಅಂಶ ಭೂಮಿಮೇಲೆ ಹುಟ್ಟುತ್ತದೆ. ಹಾಗೆ ಹುಟ್ಟಿದವನು ಸಹ ಹೊರಗೆ ಮನುಷ್ಯನಾಗಿಯೇ ಇರುತ್ತಾನೆ. ಇನ್ನೂ ಮೂರನೆಯವನಾದ ಮನುಷ್ಯ ಸೃಷ್ಟಾದಿಯಲ್ಲಿಯೇ ಹುಟ್ಟಿದ್ದಾನೆ. ಮಾಯ ಮಾರ್ಗದಲ್ಲಿ ನಡೆಯುವ ಮನುಷ್ಯ ಭೂಮಿಮೇಲೆ ನಿವಾಸಿಸುವ ಸ್ಥಳವನ್ನು, ಬಂಧುವರ್ಗವನ್ನು ಕೆಲವು ವರ್ಷಗಳಿಗೊಂದುಸಾರಿ ಮರಣ ಅನ್ನುವುದರಿಂದ ಬಿಟ್ಟುಹೋಗುತ್ತಾ, ಹುಟ್ಟು ಅನ್ನುವುದರಿಂದ ಹೊಸ ನಿವಾಸಸ್ಥಳವನ್ನು, ಹೊಸಬಂಧುವರ್ಗವನ್ನು ಪಡೆಯುತ್ತಿದ್ದಾನೆ.

ಇದೆಲ್ಲವೂ ಒಬ್ಬ ಉದ್ಯೋಗಿ ಟ್ರಾನ್ಸ್‌ಫರ್ (ವರ್ಗಾವಣೆ) ಆಗಿ ಮತ್ತೊಂದು ಊರಿನಲ್ಲಿ ಉದ್ಯೋಗ ಮಾಡಿದಂತೆ, ಒಬ್ಬ ಜೀವಿ ಒಂದು ಶರೀರವನ್ನು ಬಿಟ್ಟು ಮತ್ತೊಂದು ಶರೀರವನ್ನು ಹೊಂದಿ ಅಲ್ಲಿ ಹೊಸ ಜೀವನವನ್ನು ಸಾಗಿಸುತ್ತಿದ್ದಾನೆ. ಇದರಿಂದ ಯಾವಾಗಲು ಭೂಮಿಮೇಲೆ ಇರುವವನು ಮೂರನೆಯವನಾದ ಜೀವಿಯು (ಮನುಷ್ಯ) ಮೊದಲನೆಯವನಾದ ಪರಿಶುದ್ಧಾತ್ಮ ಅಸಲು ಹುಟ್ಟುವುದಿಲ್ಲ. ಎರಡನೆಯವನಾದ ದೇವರ ಕುಮಾರನು (ಭಗವಂತನು) ಅವಶ್ಯಕತೆ ಬಂದಾಗ ಕೆಲವು ಸಾವಿರಾರು ವರ್ಷಗಳಿಗೊಂದು ಬಾರಿ ಹುಟ್ಟುತ್ತಿರುತ್ತಾನೆಂದು ತಿಳಿಯುತ್ತಿದೆ. ಎರಡನೆಯವನಾದ ಭಗವಂತನು ಇಲ್ಲವೆ ದೇವರ ಕುಮಾರನು ಮನುಷ್ಯನಿಗೆ ಕರ್ಮಗಳು (ಪಾಪಪುಣ್ಯಗಳು) ಅಂಟದಂತಿರಲು ಮನುಷ್ಯ ಕರ್ಮಗಳಿಂದ ಹೊರಬೀಳುವುದಕ್ಕೆ ಅಗತ್ಯವಾದ ದೇವರ ಜ್ಞಾನವನ್ನು ತಿಳಿಸುವುದಕ್ಕೆ ಹುಟ್ಟುತ್ತಿರುವಾಗ, ಮನುಷ್ಯ ಮಾತ್ರ ಪಾಪವನ್ನು ಅನುಭವಿಸುವುದಕ್ಕೆ ಹುಟ್ಟುತ್ತಿರುತ್ತಾನೆ. ಕರ್ಮವನ್ನು ಅನುಭವಿಸುತ್ತಾ ಹೊಸಕರ್ಮವನ್ನು ಮನುಷ್ಯ ಸಂಪಾದಿಸಿಕೊಳ್ಳುತ್ತಾ, ಹೊಸದನ್ನು ಅನುಭವಿಸುವು ದಕ್ಕೆ, ಹೊಸ ಜಾಗ, ಹೊಸ ಸಂಬಂಧಿಕರನ್ನು, ಹೊಸ ಶರೀರದಲ್ಲಿ ಸೇರುತ್ತಿದ್ದಾನೆ. ಹಳೆಕರ್ಮವನ್ನು ಅನುಭವಿಸುತ್ತಾ ಹೊಸಕರ್ಮವನ್ನು ಪ್ರಪಂಚ ಕಾರ್ಯಗಳಲ್ಲಿ ಪ್ರಪಂಚ ಸಂಬಂಧವಾಗಿ ಸಂಪಾದಿಸಿಕೊಳ್ಳುತ್ತಿದ್ದಾನೆ. ಪ್ರಪಂಚ ಸಂಬಂಧವಾಗಿ ಸಂಪಾದಿಸಿಕೊಂಡ ಕರ್ಮವನ್ನು ಅನುಭವಿಸಿದರೆ ಮುಗಿದುಹೋಗುತ್ತದೆ. ಏಕೆಂದರೆ ಪ್ರಪಂಚ ಸಂಬಂಧ ಕರ್ಮ ಪರಿಮಿತವಾದುದು, ಅದನ್ನು ಪರಿಮಿತ ಕಾಲದಲ್ಲಿ ಅನುಭವಿಸಿದರೆ ಮುಗಿದುಹೋಗುತ್ತದೆ. ಆದರೆ ದೇವರು ಅಪರಿಮಿತವಾದವನು ಆದ್ದರಿಂದ ದೈವಸಂಬಂಧವಾಗಿ ಮಾಡಿಕೊಂಡ ಕರ್ಮ ಅಪರಿಮಿತವಾದುದು. ಮತ್ತು ಅದರ ಅನುಭವವೂ ಸಹ ಅಪರಿಮಿತ ಕಾಲವಿರುತ್ತದೆ. ಆದ್ದರಿಂದ ಪರಿಶುದ್ಧಾತ್ಮನನ್ನು ನಿಂದಿಸಿದರೆ ಈ ಯುಗದಲ್ಲಿ ಯಾದರು, ಬರುವಯುಗದಲ್ಲಿಯಾದರು ಪಾಪಕ್ಷಮಾಪಣೆ ಇಲ್ಲವೆಂದಿದ್ದಾರೆ. ದೇವರನ್ನು ನಿಂದಿಸಿದವನು ಯುಗಯುಗಗಳ ಪರ್ಯಂತರ ಪಾಪವನ್ನು

ಅನುಭವಿಸುತ್ತಲೇ ಇರಬೇಕೆಂದು ಅರ್ಥವು ತಾನೆ! ದೇವರನ್ನು ದೂಷಿಸಿದ ಮನುಷ್ಯ ಈ ಯುಗವೆಲ್ಲವೂ ಮತ್ತು ಬರುವ ಯುಗಗಳೆಲ್ಲವೂ ಇರುತ್ತದೆಂದೆ ಅಲ್ಲವೇ ಅರ್ಥ. ಆ ವಿಧವಾಗಿ ಯಾರಾದರು ಇದ್ದಾರಾ? ಎಂದು ನೋಡಿದರೆ ಒಬ್ಬನೆ ಮನುಷ್ಯ ಅಂದರೆ ದೇವರನ್ನು ದೂಷಿಸಿದವನು ಯಾರು ನೂರು ವರ್ಷಗಳಿಗಿಂತ ಹೆಚ್ಚಿನಕಾಲ ಬದುಕಲಿಲ್ಲ. ಆದರೆ ಅಲ್ಲಿ ಯುಗ ಪರ್ಯಂತವು ಇರುತ್ತದೆಂದು ದೇವರ ಮಾತು ವ್ಯರ್ಥ ಆಗುವುದಿಲ್ಲ ತಾನೆ! ಅಂದರೆ ದೇವರ ವಾಕ್ಕು ಪ್ರಕಾರ ಯುಗಯುಗಗಳವರೆಗೂ ಅವನಿರುವುದು ಸತ್ಯವೇ. ಅದು ಹೇಗೆ ಅಂದರೆ ನಿಂದಿಸಿದವನು ಸಾಯುತ್ತಾ ಹುಟ್ಟುತ್ತಾ, ಜನ್ಮಗಳು ಪಡೆಯುತ್ತಾ, ಶರೀರಗಳು ಬದಲಾವಣೆಯಾಗುತ್ತಾ ದೇವರನ್ನು ದೂಷಿಸಿದ ಪಾಪವನ್ನು ಅನುಭವಿಸುತ್ತಾನೆ. ಇಲ್ಲಿ ಮನುಷ್ಯನಿಗೆ ಜನ್ಮಗಳಿವೆ ಎಂದರೆ ದೇವರ ಮಾತು ನೆರವೇರುತ್ತದೆ. ಮನುಷ್ಯನಿಗೆ ಜನ್ಮಗಳು ಇಲ್ಲ ಎಂದರೆ ದೇವರ ಮಾತು ಅಸತ್ಯವಾಗುತ್ತದೆ. ದೇವರ ಮಾತಿಗೆ ವಿರುದ್ಧವಾಗಿ ಮಾಯೆ ಮನುಷ್ಯನಿಗೆ ಜನ್ಮಗಳಿಲ್ಲವೆಂದು ಮನುಷ್ಯರಿಂದಲೇ ಹೇಳಿಸುತ್ತದೆ. ಆದರೂ ಜ್ಞಾನದ ಪ್ರಕಾರ ಅದು ನಿಲ್ಲುವುದಿಲ್ಲ. ಜ್ಞಾನದ ಪ್ರಕಾರ ದೇವರನ್ನು ದೂಷಿಸಿದ ಮನುಷ್ಯ ಚಿರಕಾಲ ಭೂಮಿಮೇಲೆ ಪಾಪವನ್ನು ಅನುಭವಿಸುತ್ತಲೇ ಇರುವುದು ಸತ್ಯ.

ಸಾತಾನ್ ಮತ್ತು ಸೈತಾನ್ ಅನ್ನುವ ಹೆಸರಿನಿಂದ ಚಲಾವಣೆಯಾಗುವ ಮಾಯೆ ಬಹಳ ದೊಡ್ಡದು. ಅದನ್ನು ಜಯಿಸುವುದು ದುಸ್ಸಾಧ್ಯವೆಂದು ಸ್ವತಃ ಭಗವಂತನೆ **"ಮಮಮಾಯ ದುರತ್ಯಯಾ"** ಎಂದು ಭಗವದ್ಗೀತೆಯಲ್ಲಿ ಹೇಳಿದ್ದಾನೆ. ಆದ್ದರಿಂದ ಮಾಯೆ ದೇವರ ಮಾರ್ಗದಲ್ಲಿ ಪ್ರಯಾಣಿಸುವವರನ್ನು ದೇವರ ಜ್ಞಾನಕ್ಕೆ ವಿರುದ್ಧವಾಗಿ ತಯಾರುಮಾಡಿ ತನ್ನ ಜ್ಞಾನಮಾರ್ಗದಲ್ಲಿ ಪ್ರಯಾಣಿಸುವಂತೆ ಮಾಡುತ್ತದೆ. ಅದು ಎಷ್ಟು ದೊಡ್ಡ ಮೇಧಾವಿಯಾಗಿ ಮಾಡುತ್ತಿದೆ ಎಂದರೆ! ಪ್ರತಿ ಒಬ್ಬರನ್ನು ದೇವರ ಮಾರ್ಗದಲ್ಲಿಯೇ ಇರುವಂತೆ ಭ್ರಮಿಸುವಂತೆ ಮಾಡಿ ತನ್ನ ಮಾರ್ಗದಲ್ಲಿ ನಡೆಸುಕೊಳ್ಳುತ್ತಿದೆ. ಪ್ರತ್ಯೇಕಿಸಿ ದೇವರ ಜ್ಞಾನವನ್ನು ಬೋಧಿಸುವವರನ್ನೇ ಹಾಗೆ ಮಾಡುತ್ತಿದೆ. ಮಾಯೆ ಹಾಗೆ

ಮಾಡುವುದರಿಂದ ಅವರ ಬೋಧನೆಗಳು ಕೇಳುವವರಾಗಲಿ, ಅವರನ್ನು ಅನುಸರಿಸುವವರಾಗಲಿ, ದೇವರ ಮಾರ್ಗದಲ್ಲಿಯೇ ಇದ್ದೇವೆಂದುಕೊಳ್ಳುತ್ತಲೇ ಮಾಯಮಾರ್ಗದಲ್ಲಿ ಇದ್ದು ಹೋಗುತ್ತಾರೆ. ಮಾಯ ಮಾರ್ಗವನ್ನೇ ದೇವರ ಮಾರ್ಗವಾಗಿ ನಂಬಿರುತ್ತಾರೆ. ಈ ವಿಧವಾಗಿ ಮಾಯೆ ಎಲ್ಲಿಯೂ ತನ್ನ ಹೆಸರನ್ನು ಮೇಲಕ್ಕೆ ಕಾಣಿಸದಂತೆ ಮಾಡಿ ತನ್ನ ದಾರಿಯಲ್ಲಿಯೇ ಎಲ್ಲರನ್ನೂ ನಡೆಯುವಂತೆ ಮಾಡುತ್ತಿದೆ. ಕ್ರೈಸ್ತಮತದಲ್ಲಿ ಜ್ಞಾನಿಗಳೆಂದುಕೊಂಡವರನ್ನು ಸಹಿತ ಮಾಯೆ ದೇವರ ಮಾತಿಗೆ ವಿರುದ್ಧವಾಗಿ ತನಗೆ ಅನುಕೂಲವಾಗಿ ಹೇಗೆ ನಡೆಸುತ್ತಿದೆಯೋ ತಿಳಿಯುವುದಕ್ಕೆ ಮತ್ತೊಂದು ಉದಾಹರಣೆಯನ್ನು ನೋಡೋಣ.

ಮತ್ತಯಿ ಸುವಾರ್ತೆ 23ನೇ ಅಧ್ಯಾಯದಲ್ಲಿ 9ನೇ ವಚನದಲ್ಲಿ ಈ ವಿಧವಾಗಿ ಇದೆ. **"ಭೂಮಿಮೇಲೆ ಯಾರಿಗಾದರು ತಂದೆ ಎಂದು ಹೆಸರು ಇಡಬೇಡ. ಒಬ್ಬನೇ ನಿಮ್ಮ ತಂದೆ, ಆತನು ಪರಲೋಕದಲ್ಲಿದ್ದಾನೆ."** ಈ ಮಾತು ಸ್ವಚ್ಛವಾಗಿ ದೇವರ ಕುಮಾರನಾದ ಯೇಸುಪ್ರಭುವು ಹೇಳಿದ ಮಾತು. ಮೇಲಕ್ಕೆ ಕಾಣಿಸುವ ಪ್ರಭುವು ಹೇಳಿದಲ್ಲಿಯೂ ಅದನ್ನು ಪೂರ್ತಿ ದೇವರ ಮಾತಾಗಿಯೇ ಲೆಕ್ಕಿಸಬೇಕು. ಏಕೆಂದರೆ ಹೇಳಿರುವುದು ದೇವರ ಅಂಶವೆ ಆಗಿರುವುದರಿಂದ ಆ ಮಾತು ನಿಜವಾಗಲು ದೇವರ ಮಾತೆ. ದೇವರ ಮೇಲೆ ವಿಶ್ವಾಸ ಇರುವವರು ದೇವರ ಮಾತನ್ನು ತಪ್ಪದೆ ಕೇಳಬೇಕು ತಾನೆ! ಆದರೆ ಮಾಯೆ ದೇವರ ಮೇಲೆ ವಿಶ್ವಾಸ ಇರುವವರನ್ನು ಆ ಮಾತು ಕೇಳದಂತೆ ಮಾಡಿದೆ. ಅದು ನಾವು ಬೋಧಕರು, ದೇವರ ಜ್ಞಾನವನ್ನು ಕುರಿತು ವಿವರವಾಗಿ ಹೇಳುತ್ತೇವೆ ಅನ್ನುವವರ ಮೇಲೆ ಮಾಯೆ ಪಟ್ಟು ಸಾಧಿಸಿ, ಅವರನ್ನು ದೇವರ ಮಾರ್ಗದಲ್ಲಿಯೇ ಇರುವಂತೆ ನಂಬಿಸಿ, ದೇವರ ಬೋಧನೆಯನ್ನು ಬೋಧಿಸುವಂತೆ ಭ್ರಮೆಯಲ್ಲಿರಿಸಿ, ಕೊನೆಗೆ ದೇವರ ಮಾತಿಗೆ ವಿರುದ್ಧವಾಗಿ ಅವರ ಬಾಯಿಂದಲೇ ತನ್ನ ಮಾತನ್ನು ಹೇಳಿಸುತ್ತಿದೆ. ದೇವರ ಜ್ಞಾನವನ್ನು ಬೋಧಿಸುವ ಬೋಧಕರಾದ ಕೆಲವರನ್ನು ಮಾಯೆ ತಂದೆ ಎಂದು ಹೆಸರಿಟ್ಟು ಕರೆಯುವಂತೆ ಮಾಡಿದೆ. ಬೋಧಕರಿಂದಲೇ

ನಾನು ಫಾದರ್ (ತಂದೆ) ಎಂದು ಹೇಳಿಸುತ್ತಿದೆ. ಕೆಲವರು ಬೋಧಕರಿಗೆ ಗೌರವವಾಗಿ ಫಾದರ್ (ತಂದೆ) ಅನ್ನುವ ಹೆಸರನ್ನು ಇಟ್ಟು ಸಮಾಜದಲ್ಲಿ ಗೌರವ ಮರ್ಯಾದೆಗಳು ಉಂಟುಮಾಡುತ್ತಿದೆ.

ಇಂದು ಕ್ರೈಸ್ತ ಮತದಲ್ಲಿ ಬೋಧಕರಾದ ಫಾದರ್‌ಗಳು ಎಷ್ಟೋಜನ ಇದ್ದಾರೆ. ಅವರು ಬೈಬಲ್‌ನಲ್ಲಿನ ವಿಷಯಗಳನ್ನೇ ಹೇಳುತ್ತಿದ್ದಲ್ಲಿಯೂ ತಾವು ಮತ್ತಯಿ 23,9ನೇ ವಚನದಲ್ಲಿರುವ ದೇವರ ಮಾತಿಗೆ (ವಾಕ್ಕಗೆ) ವಿರುದ್ಧವಾಗಿ ಫಾದರ್ ಎಂದು ಇತರರಿಂದ ಕರೆಸಿಕೊಳ್ಳುತ್ತಿದ್ದೇವೆ ತಾನೆ! ಅನ್ನುವ ಧ್ಯಾಸ ಅವರಲ್ಲಿ ಸ್ವಲ್ಪವೂ ಸಹ ಇಲ್ಲ. ಫಾದರ್ ಹೆಸರಿನಿಂದ ಬೋಧಕರಿಗೆ ಸ್ವಲ್ಪ ಗೌರವವನ್ನು ಕಲ್ಪಿಸಿದ ಮಾಯೆ ನಾವು ದೇವರ ಸೇವಕರೆಂದು ಭ್ರಮಿಸುವಂತೆ ಮಾಡಿ, ಆ ಭ್ರಮೆಯಲ್ಲಿ ತಾವು ದೇವರ ಮಾತಿಗೆ ವಿರುದ್ಧವಾಗಿ ಇದ್ದೇವಲ್ಲ ಅನ್ನುವ ಜ್ಞಾಪಕವನ್ನು ಇಲ್ಲದಂತೆ ಮಾಡಿದೆ. ನೋಡಿದಿರಾ ಮಾಯೆ ಎಷ್ಟು ಬಲವಾದುದೋ! ದೇವರ ಮೇಲೆ ಸುಮಾರು ಐವತ್ತು ಶಾತ ವಿಶ್ವಾಸವಿರುವ ಕ್ರೈಸ್ತರಲ್ಲಿಯೇ ಮಾಯೆ ಇಷ್ಟು ಬಲವಾಗಿದ್ದರೆ, ಕೇವಲ ಎರಡರಷ್ಟು ವಿಶ್ವಾಸವಿರುವ ಹಿಂದೂಗಳಲ್ಲಿ ಮಾಯೆ ಎಷ್ಟು ಭಯಂಕರವಾಗಿ ಇರುತ್ತದೋ ಊಹಿಸಿಕೊಳ್ಳಿ. **ಮಾಯೆಗೆ ಹೆಚ್ಚಿನ ಪಟ್ಟು ಇರುವ ಮತವು ಇಂದೂಮತವೇ.** ಏಕೆಂದರೆ ಹಿಂದೂಮತದಲ್ಲಿ ದೇವರ ಮೇಲೆ ವಿಶ್ವಾಸವು ಎರಡು ಶಾತವೇ ಇದೆ, ಆದ ಕಾರಣ ಉಳಿದ 98% ರಷ್ಟು ಮಾಯೆಗೆ ಬಲವಾಗಿದೆ. ಸಮಾನ್ಯವಾಗಿ ಹಿಂದೂಮತದ ಮೇಲೆ ಹೇಳುವುದು 98% ರಷ್ಟು ಎಂದು ತಿಳಿಯಬೇಕು. ಬಿಡಿಸಿ ಹೇಳಿಕೊಂಡರೆ ಒಬ್ಬ ಮನುಷ್ಯನಲ್ಲಿ ಶೇಕಡ 90% ರಷ್ಟು ದೇವರ ಮೇಲೆ ವಿಶ್ವಾಸ ಇರಬಹುದು. ಆಗ ಅವನಲ್ಲಿ ಮಾಯೆ ಕೇವಲ 10% ರಷ್ಟು ಕೆಲಸ ಮಾಡುತ್ತದೆಂದು ಹೇಳಬಹುದು. ಹಾಗೆ ಒಬ್ಬನಲ್ಲಿ 100 ಶಾತದಷ್ಟು ದೇವರ ಮೇಲೆ ವಿಶ್ವಾಸ ಇಲ್ಲದಿರಬಹುದು. ಅಂತಹವನಲ್ಲಿ 100 ಶಾತದಷ್ಟು ಮಾಯೆ ಕೆಲಸಮಾಡುತ್ತಿದೆ ಎಂದು ತಿಳಿಯುತ್ತದೆ. ಈ ವಿಧವಾಗಿ ಲೆಕ್ಕಿಸಿ ನೋಡಿದರೆ ಹಿಂದೂಮತದಲ್ಲಿ ಸಹ ಕೆಲವರು ಅಲ್ಲಲ್ಲಿ ಬಹು ಅಪರೂಪವಾಗಿ

ದೇವರ ಮೇಲೆ ವಿಶ್ವಾಸ ಇರುವವರು ಇರಬಹುದು. ಪ್ರಸ್ತುತ ಹಿಂದೂಮತ ದಲ್ಲಿರುವ ಪರಿಸ್ಥಿತಿಯನ್ನನುಸರಿಸಿ, ಜ್ಞಾನಿಗಳನ್ನು ಅಜ್ಞಾನಿಗಳನ್ನು ಎಲ್ಲರನ್ನೂ ದೃಷ್ಠಿಯಲ್ಲಿಟ್ಟುಕೊಂಡು ಸಗಟಿಗೆ ಮಾಯೆ ಹೆಚ್ಚಾಗಿ 98 ರಷ್ಟು ಹಿಂದೂಮತದಲ್ಲಿ ಬಲವು ಹೊಂದಿದೆ ಎಂದು ಹೇಳಬಹುದು. ಎಲ್ಲದಕ್ಕಿಂತ ಹಿಂದೆ ಸುಮಾರು 1400 ವರ್ಷಗಳ ಕೆಳಗೆ ಹುಟ್ಟಿದ ಇಸ್ಲಾಮ್‌ಮತದಲ್ಲಿ ಮಾಯೆ ಕೇವಲ 10 ರಷ್ಟು ಬಲವು ಹೊಂದಿರುವಾಗ, ಅದಕ್ಕಿಂತ 600 ವರ್ಷಗಳ ಹಿಂದೆ ಹುಟ್ಟಿರುವ ಕ್ರೈಸ್ತಮತದಲ್ಲಿ 50% ರಷ್ಟು ಬಲ ಹೊಂದಿದೆ. ಮಾಯೆ 98% ರಷ್ಟು ಹಿಂದೂಮತದಲ್ಲಿ ಇದೆ ಎಂಬ ನಮ್ಮ ಮಾತು ಹಿಂದೂಗಳಾದ ಕೆಲವರಿಗೆ ಜೀರ್ಣಸಿಕೊಳ್ಳದ ವಿಷಯ. ಆದರೆ ಈ ಪುಸ್ತಕವನ್ನು ಕೊನೆಯವರೆಗು ಓದಿದರೆ ನಾನು ಹೇಳಿದ ಮಾತನ್ನು ನೀವೂ ಸಹ ಹೇಳುತ್ತೀರಾ.

ಇಲ್ಲಿಯವರೆಗೂ ಮನುಷ್ಯರಲ್ಲಿರುವ ಮತಗಳಲ್ಲಿರುವ ಮಾಯೆಯನ್ನು ವಿಶ್ಲೇಷಿಸಿ ಹೇಳಿಕೊಂಡಿದ್ದೇವೆ. ಈಗ ಹೇಳುವುದು ಏನೆಂದರೆ ಹಿಂದೂ ಮತಗ್ರಂಥವಾದ ಭಗವದ್ಗೀತೆಯಲ್ಲಿ ಜ್ಞಾನ ಎಷ್ಟರ ಮಟ್ಟಿಗೆ ಇದೆ ಎಂಬ ವಿಷಯವನ್ನು ಕುರಿತು ಹೇಳಿಕೊಳ್ಳೋಣ. ಭಗವದ್ಗೀತೆ 700 ಶ್ಲೋಕಗಳ ಗ್ರಂಥ. ಅದರಲ್ಲಿ 54 ಶ್ಲೋಕಗಳು ಮಾಯೆಗೆ ಸಂಬಂಧಿಸಿದ ಕಲ್ಪಿತ ಶ್ಲೋಕಗಳು ಇವೆ. ಇದರಿಂದ ಸುಮಾರು 93% ರಷ್ಟು ದೈವಜ್ಞಾನ, 7% ಶಾತ ಮಾಯೆಜ್ಞಾನ ಭಗವದ್ಗೀತೆಯಲ್ಲಿ ಇದೆಯೆಂದು ಹೇಳಬಹುದು. **ಎಲ್ಲಾ ಮತಗ್ರಂಥಗಳಿಗಿಂತ ಹೆಚ್ಚಾಗಿ ದೈವಜ್ಞಾನ ಇರುವ ಗ್ರಂಥ ಭಗವದ್ಗೀತೆ. ಭಗವದ್ಗೀತೆ ಹಿಂದೂ ಮತಗ್ರಂಥವಾಗಿ ಪ್ರಚಾರ ಮಾಡಲಾಗಿದೆ. ಆದರೆ ನಿಜಕ್ಕೆ ಭಗವದ್ಗೀತೆ ಹಿಂದೂಮತಗ್ರಂಥ ಅಲ್ಲ. ಇನ್ನೂ ವಿವರಿಸಿ ಹೇಳಿದರೆ ಅದು ಒಂದು ಮತಗ್ರಂಥವೇ ಅಲ್ಲ. ಎಲ್ಲಾ ಮತಗಳಲ್ಲಿ ಸರ್ವಮಾನವರಿಗೂ ಸಂಬಂಧಿಸಿದ ಜ್ಞಾನ ಭಗವದ್ಗೀತೆಯಲ್ಲಿ ಇದೆ.** ಆದ್ದರಿಂದ ಗೀತೆಯನ್ನು ಮತಗ್ರಂಥ ಅನ್ನುವುದು ಪರಪಾಟೆಂದೇ ಹೇಳಬಹುದು. ಭಗವದ್ಗೀತೆಯಲ್ಲಿ 93% ರಷ್ಟು ದೈವಜ್ಞಾನ ಮಿಳಿತಗೊಂಡಿರುವಾಗ ಹಿಂದೂಗಳಾಗಿರುವವರು ಸಗಟಿಗೆ ಗೀತೆಯಲ್ಲಿನ

ಜ್ಞಾನವನ್ನು ಕೇವಲ 3% ರಷ್ಟೂ ಸಹ ತಿಳಿದುಕೊಂಡಿಲ್ಲ. ಭಗವದ್ಗೀತೆ ನಮ್ಮ ಮತಗ್ರಂಥವೆಂದು ಹೇಳಿಕೊಳ್ಳುವ ಹಿಂದೂಗಳಿಗೆ ಅದರಲ್ಲಿನ ಭಾವನೆ 3 ಶಾತವೂ ಸಹ ಅರ್ಥ ಆಗದಿರುವಾಗ, ಅದನ್ನು ಸ್ವಲ್ಪವೂ ಓದದ ಇತರ ಮತದವರಿಗೆ ಅದರಲ್ಲಿನ ಜ್ಞಾನ ಹೇಗೆ ತಿಳಿಯುತ್ತದೆ? ಸುಮಾರು 5200 ವರ್ಷಗಳಿಂದ ಇರುವ ಭಗವದ್ಗೀತೆ ಹಿಂದೂಗಳಿಗೆ ಇಲ್ಲಿಯವರೆಗೂ ಅರ್ಥವಾಗಲಿಲ್ಲವೆಂದು ಹೇಳಬಹುದು. ಇಲ್ಲಿ ಕೆಲವರಿಗೊಂದು ಪ್ರಶ್ನೆಬಂದು ಭಗವದ್ಗೀತೆ ಭಾವವು ಸಾಮಾನ್ಯ ಮನುಷ್ಯರಿಗೆ ತಿಳಿಯದಂತೆ ಹೋಗಿರಬಹುದು. ಆದರೆ ಸ್ವಾಮೀಜಿಗಳಿಗೂ ಪೀಠಾಧಿಪತಿಗಳಿಗೂ ಸಹ ತಿಳಿದಿಲ್ಲ ಅನ್ನುತ್ತೀರಾ? ಎಂದು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ಸ್ವಾಮೀಜಿಗಳು ಬರೆದಿರುವ ಗೀತೆ ವಿವರವನ್ನೇ ಅಲ್ಲವೆ ಸಾಮಾನ್ಯ ಮನುಷ್ಯರು ಓದುತ್ತಿರುವುದು. ದೇವರು ಹೇಳಿರುವುದೊಂದಾದರೆ ಬರೆದವರು ಹೇಳಿದ ಭಾವವೊಂದಿರುವಾಗ, ಬರೆದವರಿಗೆ ಅರ್ಥವಾಗದೆ ಹಾಗೆ ಬರೆದಿದ್ದಾ ರೆಂದು ಹೇಳಬೇಕು. ಸ್ವಾಮೀಜಿಗಳಿಗೆ ಅರ್ಥವಾಗದಿರುವಾಗ ಸಾಮಾನ್ಯರಿಗೆ ಹೇಗೆ ಅರ್ಥವಾಗುತ್ತದೆ? ಆದ್ದರಿಂದ ಗೀತೆಯಲ್ಲಿ 93% ರಷ್ಟು ಜ್ಞಾನ ಇರುವುದನ್ನು ಮನುಷ್ಯರು ಗ್ರಹಿಸಿರುವುದು 3 ರಷ್ಟು ಎಂದು ಅನ್ನುತ್ತಿದ್ದೇವೆ. ಈಗ ಅನುಮಾನ ಬಂದು ಯಾರಿಗೂ ತಿಳಿಯದಿರುವುದು ನಿನಗೇಗೆ ತಿಳಿದಿದೆ? ಇಲ್ಲಿಯವರೆಗೂ ಹೇಳಿದವರಿಗಿಂತ ನೀನು ಚೆನ್ನಾಗಿ ತಿಳಿದಿರುವವನಾ? ಎಂದೂ ಸಹ ಕೆಲವರು ನನ್ನನ್ನು ಪ್ರಶ್ನಿಸಬಹುದು. ಅದಕ್ಕೆ ಉತ್ತರವಾಗಿ ಹೇಳುವುದೇನೆಂದರೆ ನಾನು ಎಲ್ಲರಿಗಿಂತ ಕಡಿಮೆ ತಿಳಿದವನೆಂದು ಒಪ್ಪಿಕೊಳ್ಳುತ್ತಿದ್ದೇನೆ. ಒಬ್ಬ ಮನುಷ್ಯನಾಗಿ ಈ ಬರಹಕ್ಕೂ ನನಗೂ ಎಂತಹ ಸಂಬಂಧವಿಲ್ಲ. ನಾನು ಕೇವಲ ಲೇಖನಿ (ಪೆನ್ನು) ಎಂತಹವನೆ. ಈ ಬರಹವನ್ನು ಬರೆಸಿದವನು, ಇರುವ ಸತ್ಯವನ್ನು ಹೇಳುವವನು ನನ್ನ ಪಕ್ಕದಲ್ಲಿರುವವನು (ಆತ್ಮ) ಎಂದು ಹೇಳುತ್ತಿದ್ದೇನೆ. ಆ ದಿನ ಗೀತೆಯನ್ನು ಹೇಳಿದವನು ಆತ್ಮೇ ಆದ್ದರಿಂದ ಗೀತೆಯಲ್ಲಿನ ಸತ್ಯವೇನೋ ಆತನಿಗೆ ಗೊತ್ತು. ಆದ್ದರಿಂದ ಆತನೇ ಹಿಂದೂಗಳಲ್ಲಿ ಎಷ್ಟು ಜ್ಞಾನ ಇರುವುದು ಹೇಳಿದ್ದಾನೆ.

ಇನ್ನೂ ನಾವು ಹೇಳುವುದೇನೆಂದರೆ, ಶೇಕಡ 93% ರಷ್ಟು ದೈವ ಜ್ಞಾನವಿರುವ ಭಗವದ್ಗೀತೆಯನ್ನು 3 ರಷ್ಟು ಅರ್ಥ ಮಾಡಿಕೊಂಡ ಮನುಷ್ಯರು ಅದನ್ನು ಎಲ್ಲಿಯವರೆಗೂ ಗೌರವಿಸುತ್ತಾರೆ ಎಂದು ನೋಡಿಕೊಳ್ಳೋಣ. ಇತರ ಮತಗಳಿಗೆ ಹೋಲಿಸಿ ನೋಡಿದರೆ ಇಸ್ಲಾಮ್ ಮತದಲ್ಲಿ ಖುರಾನ್ ಎಷ್ಟೋ ಗೌರವಿಸಲ್ಪಡುತ್ತಿದೆ. ದೇವರಿಗೆ ಸಮಾನ ಬೆಲೆಯನ್ನು ಕೊಡುತ್ತಾ ಅದನ್ನು ಎಷ್ಟೋ ಪವಿತ್ರವಾಗಿ ನೋಡಿಕೊಳ್ಳುತ್ತಿರುತ್ತಾರೆ. ಅದನ್ನು ಕೆಳಗೆ ಇಡುವುದಕ್ಕೂ ಸಹ ಮನಸ್ಸು ಒಪ್ಪುವುದಿಲ್ಲ. ಅದಕ್ಕೆ ಉನ್ನತ ಸ್ಥಾನವನ್ನು ಕಲ್ಪಿಸಿರುತ್ತಾರೆ. ಇಸ್ಲಾಮ್‌ಮತದಲ್ಲಿ ಐದು ವರ್ಷಗಳ ವಯಸ್ಸಿರುವ ಹುಡುಗನಿಗೂ ಸಹ ಖುರಾನ್ ಅಂದರೆ ಏನೊ ತಿಳಿದಿದೆ. ಮುಸ್ಲೀಮ್‌ರು ಐದು ವರ್ಷಗಳ ಹುಡುಗನನ್ನು ಸಹ ದೈವಪ್ರಾರ್ಥನೆಗೋಸ್ಕರ ಮಸೀದ್‌ಗೆ ಕರೆದುಕೊಂಡು ಹೋಗಿ ಖುರಾನ್‌ನನ್ನು ಕುರಿತು ಅವಗಾಹನಗೆ ಬರುವಂತೆ ಮಾಡುತ್ತಿರುತ್ತಾರೆ. ಯುಕ್ತವಯಸ್ಸು ಬಂದಿರುವ ಹೆಣ್ಣು ಮಗಳಿಗೆ ಮದುವೆ ಆಗದ ಮುಂಚೆಯೇ ಖುರಾನ್‌ನನ್ನು ಓದುವುದು ಕಲಿಸಿ ಪ್ರತಿದಿನ ಖುರಾನ್‌ನನ್ನು ಓದುವಂತೆ ಅಭ್ಯಾಸ ಮಾಡುತ್ತಿದ್ದಾರೆ. ಮುಖ್ಯವಾಗಿ ಹೇಳಬೇಕೆಂದರೆ ಇಸ್ಲಾಮ್‌ಮತದಲ್ಲಿ ಇರುವವರು ಹೆಚ್ಚಿನ ಶಾತ ಖುರಾನ್‌ನನ್ನು ತಮ್ಮ ಪ್ರಾಣಕ್ಕಿಂತ ಹೆಚ್ಚಾಗಿ ನೋಡಿಕೊಳ್ಳುತ್ತಿದ್ದಾರೆ. ಅವರಲ್ಲಿ ಎಷ್ಟು ದೊಡ್ಡ ಉದ್ಯೋಗಿ ಆದರೂ, ದೇಶಕ್ಕೆ ರಾಜನಾದರು ಅವರ ಗ್ರಂಥವನ್ನು, ಅವರ ದೇವರ ಜ್ಞಾನವನ್ನು ಅನುಸರಿಸಿಯೆ ನಡೆದುಕೊಳ್ಳುತ್ತಿದ್ದಾರೆ. ಇಸ್ಲಾಮ್ ದೇಶಗಳಲ್ಲಿ ದೇವರಿಗೆ ವಿರುದ್ಧವಾದ ಕಾನೂನಾಗಲಿ, ರಾಜ್ಯಾಂಗವಾಗಲಿ ಇರುವುದಿಲ್ಲ.

ಇನ್ನೂ ಹಿಂದೂದೇಶದಲ್ಲಿರುವ ಹಿಂದುಗಳಲ್ಲಿ ದೇವರೂ, ದೇವರು ಹೇಳಿದ ಭಗವದ್ಗೀತೆಯ ಬೆಲೆ ಹೇಗಿದೆಯೋ ವಿವರಿಸಿಕೊಳ್ಳೋಣ. ಹಿಂದೂ ದೇಶದಲ್ಲಿನ ಹಿಂದೂಗಳಿಗೆ ನೂರಕ್ಕೆ 80 ಜನರಿಗೆ ಭಗವದ್ಗೀತೆ ಅಂದರೆ ಏನೋ ತಿಳಿದಿಲ್ಲ. ಭಗವದ್ಗೀತೆಯನ್ನು ಕುರಿತು ಕೇಳಿ ಸಹ ಅದನ್ನು ನೋಡದವರು 10% ರಷ್ಟು ಇದ್ದಾರೆ. ಭಗವದ್ಗೀತೆಯನ್ನು ಓದದಂತೆ ನೋಡಿದವರು ನೂರಕ್ಕೆ

5 ಜನ ಇದ್ದಾರೆ. ಗೀತೆಯನ್ನು ಪೂರ್ತಿ ಓದಿದವರು ನೂರಕ್ಕೆ 5 ಜನರೇ ಇದ್ದಾರೆ.

**ಭಗವದ್ಗೀತೆಯನ್ನು ಯಾವಮಾತ್ರ ತಿಳಿಯದವರು ನೂರಕ್ಕೆ 80 ಜನ ಹಿಂದುಗಳು ಇದ್ದಾರೆ.**

**ಭಗವದ್ಗೀತೆಯನ್ನು ಕುರಿತು ಕೇಳಿಯೂ ಸಹ ಅದನ್ನು ನೋಡದವರು ನೂರಕ್ಕೆ 10 ಜನ ಹಿಂದುಗಳು ಇದ್ದಾರೆ.**

**ಭಗವದ್ಗೀತೆಯನ್ನು ನೋಡಿಯೂ ಸಹ ಅದನ್ನು ಓದದವರು ನೂರಕ್ಕೆ 5 ಜನ ಹಿಂದುಗಳು ಇದ್ದಾರೆ.**

**ಭಗವದ್ಗೀತೆಯನ್ನು ನೋಡಿ ಅದನ್ನು ಶ್ರದ್ಧೆಯಿಂದ ಓದಿದವರು ನೂರಕ್ಕೆ 5 ಜನ ಹಿಂದುಗಳು ಇದ್ದಾರೆ.**

ಹಿಂದೂಮತದಲ್ಲಿ ವಿನಃ ಯಾವ ಮತದಲ್ಲಿರುವವರಿಗಾದರು ಅವರ ಮತ ಗ್ರಂಥವನ್ನು ಕುರಿತು ಪೂರ್ತಿ ತಿಳಿದಿರುತ್ತದೆ. ಮತಗ್ರಂಥವನ್ನು ನೋಡದವರು ಯಾರೂ ಇರುವುದಿಲ್ಲ. ಓದು ಬರದವರು ಅವರು ಓದಲಾರದೆ ಇರಬಹುದು. ಆದರೆ ಪವಿತ್ರವಾಗಿ ನೋಡುತ್ತಿರುತ್ತಾರೆ. ಕೇವಲ ಒಂದು ಹಿಂದೂಮತದಲ್ಲಿಯೇ ಭಗವದ್ಗೀತೆಯನ್ನು ತಿಳಿಯದವರು, ನೋಡದವರು, ಓದು ಬಂದು ಓದದವರು ಇದ್ದಾರೆ. ಕೆಲವು ಹಳ್ಳಿಗಳಲ್ಲಿ ಹೋಗಿ ನೋಡಿದರೆ ಊರು ಎಲ್ಲವೂ ಭಗವದ್ಗೀತೆ ಅಂದರೆ ಏನೋ ತಿಳಿಯದವರು ಸಹ ಇದ್ದಾರೆ. ಮಂಡಲ ಸ್ಥಾಯಿಯಲ್ಲಿ, ಜಿಲ್ಲೆಸ್ಥಾಯಿಯಲ್ಲಿ ಮತ್ತು ಪಟ್ಟಣಗಳಲ್ಲಿ ಮಾತ್ರ ಗೀತೆಯನ್ನು ಕುರಿತು ತಿಳಿದವರು ಕೆಲವರು ಇದ್ದಾರೆ. ಈಗ ಪ್ರಸ್ತುತಕಾಲದಲ್ಲಿ ಯುವತಿಯುವಕರಾಗಿವವರನ್ನು ನೋಡಿದರೆ ಸ್ವಲ್ಪಕಾಲ ಓದು ನಂತರ ಉದ್ಯೋಗಗಳು ಬಿಟ್ಟರೆ ಗೀತೆಯನ್ನು ಕುರಿತು ಸ್ವಲ್ಪವೂ ತಿಳಿಯದ ಸ್ಥಿತಿಯಲ್ಲಿ ಇದ್ದಾರೆ. ಐವತ್ತುವರ್ಷ ವಯಸ್ಸಿರುವವರನ್ನು ಕದಲಿಸಿ ಭಗವದ್ಗೀತೆಯನ್ನು

ಕುರಿತು ಹೇಳಿದರೆ ನಮಗೆ ಈ ವಯಸ್ಸಿನಲ್ಲಿ ಏಕೆ? ಪೂರ್ತಿ ಮುದುಕರಾಗಿ ಯಾವ ಕೆಲಸ ಮಾಡದಿರುವಾಗ ಬಿಡುವಿನ ವೇಳೆಯಲ್ಲಿ ಓದಿಕೊಳ್ಳ ಬಹುದು, ಈಗ ಅದರಿಂದ ಏನು ಕೆಲಸವಿದೆ ಅನ್ನುತ್ತಿದ್ದಾರೆ. ಯಾರಾದರು ಚಿಕ್ಕ ವಯಸ್ಸಿನಲ್ಲಿಯೇ ಅವರು 15 ರಿಂದ 20 ವರ್ಷಗಳ ವಯಸ್ಸಿರುವವರು ಗೀತೆಯನ್ನು ಕುರಿತು, ಅದರಲ್ಲಿನ ಜ್ಞಾನವನ್ನು ಕುರಿತು ತಿಳಿದುಕೊಳ್ಳಬೇಕೆಂದರೆ ಮನೆಯಲ್ಲಿನ ತಂದೆತಾಯಿಯರು ವಿರೋಧಿಗಳಾಗಿ ಜ್ಞಾನ ತಿಳಿದುಕೊಳ್ಳಬೇಕೆಂದರೆ ಮನೆಯೊಳಗೆ ಬರಬೇಡ. ನಮ್ಮಜೊತೆ ಸಂಬಂಧ ಇಟ್ಟುಕೊಳ್ಳಬೇಡ ಅನ್ನುವವರು ಸಹ ಇದ್ದಾರೆ. ಹೆಂಡತಿ ದೈವಜ್ಞಾನ ತಿಳಿದುಕೊಂಡರೆ ಸರಿಹೋಗದ ಗಂಡಸರಿದ್ದಾರೆ. ಅಷ್ಟೇ ಅಲ್ಲದೆ ಗಂಡ ಜ್ಞಾನ ತಿಳಿದುಕೊಳ್ಳುವುದಕ್ಕೆ ಪ್ರಯತ್ನಿಸಿದ್ದರೆ ಡೈವರ್ಸ್ ಕೊಡುತ್ತೇವೆನ್ನುವ ಹೆಂಡತಿಯರು ಇದ್ದಾರೆ. ಮಗ ಭಗವದ್ಗೀತೆಯನ್ನು ಬಚ್ಚಿಟ್ಟುಕೊಂಡು ಕಳ್ಳತನದಿಂದ ಓದುತ್ತಿದ್ದರೆ ನೋಡಿದ ತಂದೆ ಭಗವದ್ಗೀತೆಯನ್ನು ಬೆಂಕಿಕಡ್ಡಿಯಿಂದ ಅಚ್ಚಿ ಸುಟ್ಟುಹಾಕಿದ್ದಾನೆ. ಇದು ಹಿಂದೂ ಮತದಲ್ಲಿ ಭಗವದ್ಗೀತೆಗೂ ಅದರಲ್ಲಿನ ಜ್ಞಾನಕ್ಕೂ ಇರುವ ಬೆಲೆ!

ಹಿಂದೂಮತದಲ್ಲಿನ ಪರಿಸ್ಥಿತಿಯನ್ನು ಪಕ್ಕದಲ್ಲಿದ್ದು ಗಮನಿಸುತ್ತಿರುವ ಕ್ರೈಸ್ತರು ಅವರ ಮತ ಪ್ರಚಾರವೆ ಮುಖ್ಯವಾದ ಘಟ್ಟವಾಗಿ ಇಟ್ಟುಕೊಂಡವರಾಗಿ ಜ್ಞಾನ ತಿಳಿಯದ ಹಿಂದುಗಳನ್ನು ಮಾತುಗಳ ಗಾರಡಿಯಿಂದ ಅವರ ಮತದೊಳಗೆ ಸುಲಭವಾಗಿ ಸೇರಿಸಿಕೊಳ್ಳುತ್ತಿದ್ದಾರೆ. ಹಿಂದೂಮತದಲ್ಲಿ ಸ್ವಲ್ಪವೂ ಸಹ ಜ್ಞಾನ ತಿಳಿಯದವರು, ಭಗವದ್ಗೀತೆಯ ಹೆಸರು ಸಹ ಕೇಳದವರು, ತಾವು ಯಾವ ಮತದಲ್ಲಿ ಇದ್ದೆವೋ ಎಂದು ಸಹ ತಿಳಿಯದವರು, ಕ್ರೈಸ್ತಮತದೊಳಗೆ ಸುಲಭವಾಗಿ ಸೇರಿಹೋಗಿ ಕ್ರೈಸ್ತರು ಅನ್ನುತ್ತಿದ್ದಾರೆ. ಅಲ್ಲಿಯವರೆಗೂ ತಾವು ಹಿಂದುಗಳೆಂದು ಸಹ ಅವರಿಗೆ ತಿಳಿದಿಲ್ಲವಾದ್ದರಿಂದ ಕ್ರೈಸ್ತರೆಂದು ಹೇಳಿಕೊಳ್ಳುವುದರಿಂದ ಯಾವುದೋ ಡಿಗ್ರಿ ಹೊಂದಿದಷ್ಟು ಸಂತೋಷ ಪಡೆಯುತ್ತಿದ್ದಾರೆ. ಈ ವಿಧವಾಗಿ ಹಿಂದೂ ಮತದಲ್ಲಿನವರು ಕ್ರೈಸ್ತಮತದೊಳಗೆ ಸೇರಿಹೋಗುತ್ತಿದ್ದರೆ, ಕ್ರೈಸ್ತಮತವು ಅಭಿವೃದ್ಧಿ ಆಗುತ್ತಿದೆ ಎಂದು ದುಃಖ

ಪಡುತ್ತಿದ್ದಾರೆ. ಅಂತಹವರೆಲ್ಲರೂ ಕೆಲವು ಗುಂಪುಗಳಾಗಿ ತಯಾರಾಗಿ ಹಿಂದೂಮತ ರಕ್ಷಣ ಸಮಿತಿಯೆಂದು, ಹಿಂದೂ ಮತ ಉದ್ಧರಣ ಕಮಿಟಿಯೆಂದು, ಹಿಂದೂಪರಿಷತ್ ಎಂದು ಅನೇಕ ವಿಧ ಸಂಸ್ಥೆಗಳಾಗಿ ಏರ್ಪಟ್ಟು ಮತ ಬದಲಾವಣೆ ಆಗದಂತೆ ನೋಡಿಕೊಳ್ಳ ಬೇಕೆಂದುಕೊಂಡಿದ್ದಾರೆ. ಸಮಸ್ಯೆ ಜ್ಞಾನದಿಂದ ಪರಿಷ್ಕಾರವಾಗುತ್ತದೆಂದು ತಿಳಿಯದೆ ಹೋಗುವುದರಿಂದ, ಈ ಗುಂಪುಗಳಲ್ಲಿ ಜ್ಞಾನ ತಿಳಿದವರು ಇಲ್ಲದಿರುವುದರಿಂದ ಕ್ರೈಸ್ತವ ಬೋಧಕರಿಗೆ ಅವರ ಮತವನ್ನು ಕುರಿತು ಹಿಂದುಗಳಲ್ಲಿ ಪ್ರಚಾರ ಮಾಡಬಾರದೆಂದು ಹೇಳಿದ್ದಾರೆ. ಕ್ರೈಸ್ತವಬೋಧಕರ ಮುಖ್ಯವಾದ ಕೆಲಸ ಮತ ಪ್ರಚಾರವಾದ್ದರಿಂದ ಅವರು, ಇವರ ಮಾತನ್ನು ಖಾತರು ಮಾಡದಂತೆ ಬೋಧನೆಗಳು ಹೇಳುವುದು, ಇವರು ಅವರ ಮೇಲೆ ಭೌತಿಕವಾಗಿ ದಾಳಿ ಮಾಡುವುದು ನಡೆಯುತ್ತಿದೆ. ಆದರೂ ಪ್ರಯೋಜನೆಯಿಲ್ಲ. ಅವರು ಯಾವುದೋ ಒಂದು ವಿಧವಾಗಿ ಬೋಧನೆಗಳು ಹೇಳುತ್ತಲೇ ಇದ್ದಾರೆ. ಈ ಮಧ್ಯೆ ಹಿಂದುಗಳಲ್ಲಿ ಎಷ್ಟು ಪರಿಷತ್‌ಗಳು ಏರ್ಪಟ್ಟರು ಕ್ರೈಸ್ತರು ಪ್ರತ್ಯೇಕ ಟೀವಿ ಚಾನಲ್‌ಗಳನ್ನು ಇಟ್ಟು ಅವರ ಬೋಧನೆಗಳನ್ನು ಪ್ರಚಾರ ಮಾಡುತ್ತಲೆ ಇದ್ದಾರೆ.

ಮನೆ ಅತ್ತಿಕೊಂಡಾಗ ಅದನ್ನು ಆರಿಸುವುದಕ್ಕೆ ನೀರನ್ನು ಉಪಯೋಗಿಸಬೇಕು. ಹಾಗಲ್ಲದೆ ನೀರಿನಂತಿರುವ ಎಣ್ಣೆಯನ್ನು ನೀರೇ ಎಂದು ಉಪಯೋಗಿಸಿದರೆ ಉರಿ ಮತ್ತಷ್ಟು ಹೆಚ್ಚಾಗುತ್ತದೆ, ಆದರೆ ಎಣ್ಣೆಯಿಂದ ಆರಿಹೋಗುವುದಿಲ್ಲ. ಅದೇ ವಿಧವಾಗಿ ಮತ ಮಾರ್ಪಾಡು ಸಮಸ್ಯೆಯನ್ನು ಅತಿಕ್ರಮಿಸುವುದಕ್ಕೆ ಜ್ಞಾನಾಗ್ನಿ ಉಪಯೋಗಿಸಿದರೆ ಸಮಸ್ಯೆ ತೀರಿಹೋಗುತ್ತದೆ, ಆದರೆ ಬಲವನ್ನು ಉಪಯೋಗಿಸಿದರೆ ಸಮಸ್ಯೆ ಇಲ್ಲದೆ ಹೋಗುವುದಿಲ್ಲ, ಮತ್ತಷ್ಟು ಜಟಿಲವಾಗುತ್ತದೆ. ಮತಮಾರ್ಪಾಡು ಸಮಸ್ಯೆ ಪರಿಷ್ಕಾರ ಆಗುವುದಕ್ಕೆ ಭೌತಿಕ ದಾಳಿಗಳು ಕೆಲಸಕ್ಕೆ ಬರುವುದಿಲ್ಲ. ಅಭೌತಿಕವನ್ನು ತಿಳಿಸುವ ಜ್ಞಾನ ಬೇಕು. ಅಂತಹ ಜ್ಞಾನ ಹಿಂದುಗಳಲ್ಲಿ ಕಾಣಿಸುತ್ತಿಲ್ಲ. ದೈವಜ್ಞಾನವಾಗಲಿ, ಆತ್ಮಜ್ಞಾನವಾಗಲಿ ಸಾಸುವೆ ಕಾಳಿನಷ್ಟು ಸಹ ಇಲ್ಲ ಹಿಂದುಗಳ ಗುಂಪುಗಳಿಂದ

ಹಿಂದೂಮತಕ್ಕೆ ನಷ್ಟ ಏರ್ಪಡುತ್ತಿದೆ. ಕುರುಡನು ಕಳ್ಳನನ್ನು ಹೊಡೆಯಬೇಕೆಂದು ಕಟ್ಟಿಗೆಯನ್ನು ತೆಗೆದುಕೊಂಡು ತನ್ನ ಮನೆಯಲ್ಲಿನ ಮಡಿಕೆಗಳನ್ನು ಹೊಡೆದುಕೊಂಡಂತೆ, ಅಜ್ಞಾನ ಕುರುಡುತನ ಇರುವ ಹಿಂದೂಸಂಸ್ಥೆಗಳು ತಮ್ಮ ಮತವನ್ನು ಉದ್ಧರಿಸುವುದು ಹೋಗಿ, ತಮ್ಮ ಮತವನ್ನು ತಾವೇ ಇಳಿಜಾರಿಹೋಗುವಂತೆ ಮಾಡುತ್ತಿವೆ. ಈ ಮಾತನ್ನು ನಾವು ಅಂದರೆ ಕೆಲವರಿಗೆ ಕೋಪಬರುತ್ತದೇನೋ ಆದರೆ ನಾವು ಹೇಳುವ ಯಥಾರ್ಥ ಸಂಘಟನೆಯನ್ನು ಓದಿದ ನಂತರ ನಿಮ್ಮಲ್ಲಿ ಏನನಿಸುತ್ತದೋ ನೀವೇ ನೋಡಿಕೊಳ್ಳಿ! ನಡೆದ ಈ ಸಂಘಟನೆಯಿಂದ ಹಿಂದೂಮತಕ್ಕೆ ಇತರ ಮತಗಳ ಮುಂದೆ ತಲೆ ಎತ್ತುಕೊಳ್ಳಬೇಕಾಗಿ ಬರುತ್ತದೋ, ತಲೆ ಬಗ್ಗಿಸಿಕೂಳ್ಳಬೇಕಾಗಿ ಬರುತ್ತದೋ ನೀವೇ ಯೋಚಿಸಿಕೊಳ್ಳಿ!

ಇಲ್ಲಿಯವರೆಗೂ ಇದೆಲ್ಲವು ಬರೆದ ನಾವು ಎಲ್ಲರೂ ಅಂದುಕೊಂಡಂತೆ ಹಿಂದೂಮತಕ್ಕೆ ಸಂಬಂಧಿಸಿದವರೇ. ಮೇಲೆ ನೋಡುವುದಕ್ಕೆ ನಾವು ಹಿಂದೂ ಮತದಲ್ಲಿ ಇದ್ದಲ್ಲಿಯೂ ಒಳಗೆ ಇಂದೂಪಥದಲ್ಲಿ ಇರುವವರೇ. ನಮಗೆ ತಿಳಿದಂತೆ ನಮ್ಮದು ಇಂದೂಪಥವೆ ಆದರೂ ನಿಮಗೆ ತಿಳಿದಂತೆ ನಮ್ಮದು ಹಿಂದೂಮತವೇ ಎಂದು ಹೇಳಬಹುದು. **ಯಾರು ಏನೆಂದುಕೊಂಡರು ನಮಗೆ ಮತವು ಮುಖ್ಯವಲ್ಲ ಪಥವೇ ಮುಖ್ಯವಾದದು. ಆದ್ದರಿಂದ ಯಾವ ಮತದಲ್ಲಿನ ಜ್ಞಾನವನ್ನಾದರು ಒಪ್ಪಿಕೊಳ್ಳುತ್ತೇವೆ, ಆದರೆ ಯಾವ ಮತದಲ್ಲಿನ ಸ್ವಲ್ಪ ಅಜ್ಞಾನವನ್ನು ಸಹ ಒಪ್ಪಿಕೊಳ್ಳುವುದಿಲ್ಲ**. ದೇವರು ಸರ್ವ ಮಾನವರಿಗೂ ಸಂಬಂಧಿಸಿರುವವನು. ಹಾಗೆ ದೇವರ ಜ್ಞಾನ ಎಲ್ಲರಿಗೂ ಸಂಬಂಧಿಸಿರುವುದು. ಎಲ್ಲರಿಗೂ ಸಂಬಂಧಿಸಿದ ಜ್ಞಾನ ಯಾವ ಮತದಲ್ಲಿ ಇದ್ದರು ಅದು ನಿನಗೂ ನನಗೂ ಸಹ ಸಂಬಂಧಿ ಸಿರುವುದೇ ಆಗುತ್ತದೆ. **ಆದ್ದರಿಂದ ದೈವಜ್ಞಾನವನ್ನು ಯಾವ ಮತದಿಂದ ಆದರೂ ಗ್ರಹಿಸಬಹುದು, ಅದೇ ವಿಧವಾಗಿ ದೈವಜ್ಞಾನವೆಂಬ ಹೆಸರಿನಿಂದ ಮಾಯಜ್ಞಾನವನ್ನು ಯಾವ ಮತದಲ್ಲಿದ್ದರೂ ಅದನ್ನು ಪೂರ್ತಿಯಾಗಿ ಖಂಡಿಸಬಹುದು. ಅಜ್ಞಾನವನ್ನು ಖಂಡಿಸಬೇಕಾದ ಜವಾಬ್ಧಾರಿ ಎಲ್ಲರಿಗೂ ಇದೆ.** ಈ ಸೂತ್ರದ ಪ್ರಕಾರ ದೈವಜ್ಞಾನ

ಇಲ್ಲಿ ಹಿಂದೂಮತದಲ್ಲಿ ಇದ್ದರೂ, ಅಲ್ಲಿ ಕ್ರೈಸ್ತ ಮತದಲ್ಲಿದ್ದರು ನಾನು ಅದನ್ನು ತಪ್ಪದೆ ಪ್ರಶಂಸಿಸುತ್ತೇನೆ. ಹಾಗೆ ದೈವಜ್ಞಾನಕ್ಕೆ ವಿರುದ್ಧವಾದ ಮಾಯೆಜ್ಞಾನ ಇತ್ತ ಹಿಂದೂಮತದಲ್ಲಿ ಇದ್ದರೂ, ಅತ್ತ ಕ್ರೈಸ್ತಮತದಲ್ಲಿ ಇದ್ದರೂ ನಾನು ಅದನ್ನು ತಪ್ಪದೆ ಖಂಡಿಸುತ್ತೇನೆ. ಇದು ನಮ್ಮ ನೈಜವು.

ಆ ನೇಪಥ್ಯದಲ್ಲಿರುವ ನಮಗೆ ಕ್ರೈಸ್ತಮತದಲ್ಲಿ ದೇವರ ಜ್ಞಾನಕ್ಕೆ ವಿರುದ್ಧವಾದ ಮಾಯೆಜ್ಞಾನ ಕಾಣಿಸಿದೆ. ಆಗ ನನ್ನ ಜವಾಬ್ಧಾರಿಯ ಪ್ರಕಾರ ನಾನು ಮಾಯೆಜ್ಞಾನವನ್ನು ಖಂಡಿಸಿ, ದೇವರ ಜ್ಞಾನವನ್ನು ವಿವರವಾಗಿ ಹೇಳಬೇಕಾಗಿ ಬಂದಿದೆ. ನಾನು ಒಂದು ದಿನ ಹೈದರಾಬಾದ್ ಪಟ್ಟಣದಲ್ಲಿ ಪ್ರಯಾಣಿಸುತ್ತಿರುವಾಗ ಕಾರಿನ ಕನ್ನಡಿಯನ್ನು ಇಳಿಸುವುದಕ್ಕೆ ಪಕಕ್ಕೆ ನೋಡಿದೆವು. ಆಗ ಅಲ್ಲಿ ಒಂದು ಕಾಂಪೌಂಡ್ ಗೋಡೆಯ ಮೇಲೆ ದೊಡ್ಡ ದೊಡ್ಡ ಅಕ್ಷರಗಳಿಂದ ಬರೆದಿರುವುದು ಕಾಣಿಸಿತು. ಅಲ್ಲಿ ಏನು ಬರೆದಿದೆ ಎಂದರೆ! ಸೃಷ್ಟಿಕರ್ತ ಕೋಡ್ 666 ಎಂದು ಬರೆದಿದೆ. ಅದನ್ನು ನೋಡಿದ ನಾವು ತಕ್ಷಣ ನಮ್ಮ ಪಕ್ಕ ಇರುವ ವ್ಯಕ್ತಿಯ ಹತ್ತಿರ **"ಯಾರೋ ಇದು ತಪ್ಪಾಗಿ ಬರೆದಿದ್ದಾರೆ. ದೇವರ ಕೋಡ್ 963 ಎಂದು ಇರಬೇಕು. ಅವರು ಬರೆದಿರುವುದು ಮಾಯೆ ನಂಬರ್. ಮಾಯೆ ನಂಬರನ್ನು ದೇವರ ನಂಬರಾಗಿ ಬರೆಯುವುದು ತಪ್ಪು"** ಅಂದಿದ್ದೇವೆ. ಮತ್ತೆ ಸ್ವಲ್ಪ ದೂರ ಹೋದ ನಂತರ ಒಂದುವಾಲ್‌ಪೋಸ್ಟರ್ ಕಾಣಿಸಿದೆ. ಅದರ ಮೇಲೆ ಸಹ ಸೃಷ್ಟಿಕರ್ತಕೋಡ್ 666 ಎಂದು ಬರೆದಿದ್ದು ಅದರ ಪಕ್ಕದಲ್ಲಿ ಯೋಹಾನ್ ಪ್ರಕಟಣೆಗಳ ಗ್ರಂಥ 13–18 ಎಂದು ಬ್ರಾಕೆಟ್‌ನಲ್ಲಿ ಬರೆಯಲಾಗಿದೆ. ಆಗ ತಿಳಿದಿರುವುದು ಇದು ಬೈಬಲ್‌ನಲ್ಲಿನ ವಾಕ್ಯವೆಂದು! ನಂತರ ಮನೆಗೆ ಬಂದು ಬೈಬಲ್ ತೆಗೆದು ಯೊಹನ್ ಪ್ರಕಟಣೆಗಳೆಂಬ ಭಾಗದಲ್ಲಿ 13ನೇ ಅಧ್ಯಾಯದಲ್ಲಿ 18ನೇ ವಾಕ್ಯವನ್ನು ಓದಿದ್ದೇವೆ. ಅಲ್ಲಿಯೂ ಸಹ ಅದು ದೇವರ ನಂಬರ್ ಆಗಿ ಇಲ್ಲ. ತಕ್ಷಣ ಯೋಹಾನ್ ಪ್ರಕಟಣೆಗಳ ಭಾಗದಲ್ಲಿನ 22 ಅಧ್ಯಾಯಗಳೆಲ್ಲವನ್ನು ಓದಿದ್ದೇವೆ ಆಗ ಅದು ಸೈತಾನ್ (ಮಾಯ) ನಂಬರ್ ಎಂದು ಸ್ಪಷ್ಟವಾಗಿ ಅರ್ಥವಾಗಿದೆ. ಅದರಿಂದ ಅವರು ಗೋಡೆಗಳ ಮೇಲೆ

ಬರೆದಿರುವುದು ಪೂರ್ತಿ ತಪ್ಪೆಂದು ತಿಳಿದುಹೋಗಿದೆ. ಬೈಬಲ್‌ನಲ್ಲಿ ಪ್ರಕಟಣೆಗಳ ಗ್ರಂಥ 13ನೇ ಅಧ್ಯಾಯ 18ನೇ ವಾಕ್ಯವು ಹೀಗೆ ಇದೆ. **"ಬುದ್ಧಿ ಇರುವವನು ಮೃಗ ವೊಂದರ ಸಂಖ್ಯೆಯನ್ನು ಲೆಕ್ಕಿಸುವುದಿಲ್ಲ. ಅದೊಂದು ಮನುಷ್ಯನ ಸಂಖ್ಯೆಯೇ. ಆ ಸಂಖ್ಯ ಆರುನೂರ ಅರವತ್ತಾರು, ಇದರಲ್ಲಿ ಜ್ಞಾನ ಇದೆ."** ಈ ವಾಕ್ಯದ ಪ್ರಕಾರ ಅದು ದೇವರ ಸಂಖ್ಯೆಯಲ್ಲ ಎಂದು ತಿಳಿದುಹೋಗುತ್ತದೆ. ಆದರೆ ಮಾಯೆ ನಂಬರಾಗಿ ಹೇಳಿದರು ಆರುನೂರಅರವತ್ತಾರು ಯಾವ ವಿಧಾನದಿಂದ ಆ ಸಂಖ್ಯೆಯನ್ನು ಹೇಳಿದ್ದಾರೆನ್ನುವುದು ಅಲ್ಲಿಯಾಗಲಿ, ಒಟ್ಟು ಎಲ್ಲಾ ಅಧ್ಯಾಯಗಳು ಓದಿದಾಗಲೂ ಎಲ್ಲಿಯು ವಿವರವಿಲ್ಲ. ಆಗ ಆರುನೂರ ಅರವತ್ತಾರನ್ನು ದೇವರ ಸಂಖ್ಯೆಯಾಗಿ ಪ್ರಕಟಿಸಿದವರನ್ನು ಮಾತನಾಡಿಸಿದರೆ ಆ ಸಂಖ್ಯೆಯ ವಿವರ ಏನಾದರು ತಿಳಿಯುತ್ತದೇನೋ ಎಂದು ಅಂದು ಕೊಂಡಿದ್ದೇವೆ. ನಂತರ ಅವರ ಜೊತೆ ಮಾತನಾಡುವುದು ನಡೆದಿದೆ. ಅವರ ಹತ್ತಿರ ಮಾತನಾಡಿದ ವಿವರವೆಲ್ಲ ನಾವು ಬರೆದಿರುವ **"ಸೃಷ್ಟಿಕರ್ತ ಕೋಡ್ 963, ಮಾಯ ಕೋಡ್ 666"** ಅನ್ನುವ ಪುಸ್ತಕದಲ್ಲಿ ಹೊಂದಿಸಿದ್ದೇವೆ. ಅಲ್ಲಿ ಅವರ ಹತ್ತಿರ ಸರಿಯಾದ ಸಮಾಧಾನ ಇಲ್ಲವೆಂದು ತಿಳಿದುಹೋಗಿದೆ. ಅವರು 666 ನ್ನು ಮಾಯ (ಸಾತಾನ್) ನಂಬರ್ ಎಂದು ಒಪ್ಪಿಕೊಳ್ಳುತ್ತಲೇ ಅದನ್ನು ದೇವರ ನಂಬರಾಗಿ ಹೇಳಬೇಕೆಂದು ಪ್ರಯತ್ನಿಸಿದ್ದಾರೆ.

ಆಗ ಆರುನೂರ ಅರವತ್ತಾರು ಮಾಯೆ ನಂಬರೆಂದು, ಅದು ದೇವರ ನಂಬರು ಅಲ್ಲವೆಂದು ವಿವರವಾಗಿ ಹೇಳಿದರು ನಾವು ಪ್ರತ್ಯೇಕವಾದ ಪುಸ್ತಕ ಬರೆಯಬೇಕಾಗಿ ಬಂದಿದೆ. ಆ ಪುಸ್ತಕದಲ್ಲಿ ದೇವರ ಕೋಡ್ ಇಂತಹದೆಂದು ಸಹ ವಿವರಿಸಬೇಕಾಗಿ ಬಂದಿದೆ. ಆ ಸಂದರ್ಭದಲ್ಲಿ ಮಾಯೆ ಮತಗ್ರಂಥಗಳಲ್ಲಿ ಹೇಗೆ ಸ್ಥಳ ಮಾಡಿಕೊಂಡಿದೆಯೋ ವಿವರಿಸುವುದರಲ್ಲಿ ಬೈಬಲ್‌ನಲ್ಲಿನ ಒಂದು ಘಟ್ಟವನ್ನು ತೆಗೆದುಕೊಂಡು ಇದು ದೇವರು ಹೇಳಿರುವುದು ಅಲ್ಲವೆಂದು ಹೇಳಬೇಕಾಗಿಬಂದಿದೆ. ಬೈಬಲ್‌ನಲ್ಲಿನ ಆದಿಕಾಂಡದಲ್ಲಿನ ಮೊದಲ ಅಧ್ಯಾಯ

ಮೊತ್ತವು ಶಾಸ್ತ್ರಬದ್ಧವು ಅಲ್ಲವೆಂದು, ಕಲ್ಪಿಸಿ ಮನುಷ್ಯರು ಹೇಳಿರುವುದು ಬಿಟ್ಟರೆ ದೇವರು ಹೇಳಿರುವುದು ಅಲ್ಲವೆಂದು ಹೇಳುವುದಾಗಿದೆ. ಬೈಬಲ್ ಆದಿಕಾಂಡದಲ್ಲಿನ ಸೃಷ್ಟಿ ವಿಧಾನವನ್ನು ನಾವು ಖಂಡಿಸುವುದರಿಂದ ಸ್ವಲ್ಪಜನ ಕ್ರೈಸ್ತವ ಸೋದರರಿಗೆ ಸ್ವಲ್ಪ ದುಃಖ ಉಂಟಾದರು ವಿಜ್ಞಾನಹೊಂದಿದರು ಕ್ರೈಸ್ತರೆಲ್ಲ ನಮ್ಮ ಮಾತನ್ನು ಸಮರ್ಥಿಸಿದ್ದಾರೆ. ಅಲ್ಲಿ ನಮ್ಮ ಮಾತನ್ನು ಅಲ್ಲ ಎನ್ನುವುದಕ್ಕೆ ಯಾವ ದಾರಿಯಿಲ್ಲ, ಆದ್ದರಿಂದ ಆ ವಿಷಯವನ್ನು ಕುರಿತು ಕ್ರೈಸ್ತವ ಸೋದರರು ಏನು ಮಾತನಾಡಲಿಲ್ಲ. ನಾವು ದೇವರ ಜ್ಞಾನವನ್ನು ಸಮರ್ಥಿಸುತ್ತಾ, ಮಾಯೆ ಜ್ಞಾನವನ್ನು ವಿಮರ್ಶಿಸುತ್ತಾ, ಪುಸ್ತಕ ಬರೆದು ಸುಮಾರು ಹತ್ತುಸಾವಿರ ಪುಸ್ತಕಗಳನ್ನು ಉಚಿತವಾಗಿ ಹಂಚಿದ್ದೇವೆ. ಇದು ಮಾಯೆ ಜ್ಞಾನ, ಇದು ದೇವರ ಜ್ಞಾನ ಎಂದು ತಿಳಿಯುವುದಕ್ಕೆ 20 ಸಾವಿರ ವಾಲ್‌ಪೋಸ್ಟರ್ಸ್‌ನ್ನು ರಾಷ್ಟ್ರವೆಲ್ಲವೂ ಅಂಟಿಸುವುದು ನಡೆದಿದೆ. ಅಷ್ಟೇ ಅಲ್ಲದೆ ರಾಷ್ಟ್ರವ್ಯಾಪ್ತವಾಗಿ ಗೋಡೆಗಳ ಮೇಲೆ ಸೃಷ್ಟಿಕರ್ತಕೋಡ್ 963, ಮಾಯೆ ಕೋಡ್ 666 ಎಂದು ಬರೆಸಿದ್ದೇವೆ. ಕ್ರೈಸ್ತವರು ಬರೆದ ಸೃಷ್ಠಿಕರ್ತ ಕೋಡ್ 666 ಪಕ್ಕದಲ್ಲಿಯೇ ಸೃಷ್ಟಿಕರ್ತಕೋಡ್ 963 ಎಂದು ಹೈದರಾಬಾದ್‌ನಲ್ಲಿ ಅನೇಕ ಕಡೆ ಬರೆಸಿದ್ದೇವೆ. ಹಾಗೆ ಬರೆಯುವುದರಿಂದ ಎಲ್ಲಾರ ದೃಷ್ಟಿ ಅದರ ಮೇಲೆ ಬಿದ್ದು ಅದರ ವಿವರ ತಿಳಿದುಕೊಳ್ಳುವ ಪ್ರಯತ್ನ ಮಾಡುತ್ತಾರೆಂದು ಅಂದುಕೊಂಡಿದ್ದೇವೆ. ನಾವು ಗೋಡೆಗಳಿಗೆ ಅಂಟಿಸಿದ ಪೇಪರ್‌ಗಳ ಮೇಲೆ ಇದರ ವಿವರವಿರುವ ಪುಸ್ತಕ ಇಂತಹ ಕಡೆ ಸಿಗುತ್ತದೆಂದು ಅಡ್ರಸ್ ಬರೆಯುವುದು ನಡೆದಿದೆ. ಸೃಷ್ಟಿಕರ್ತ ಕೋಡ್ 963 ಎಂದು ಬರೆದ ಕಡೆ ಇದು ಭಗವದ್ಗೀತೆಯಲ್ಲಿನ ಜ್ಞಾನವೆಂದು ತಿಳಿಯುವಂತೆ ಭಗವದ್ಗೀತೆ ಅ. 15, ಶ್ಲೋಕ 16, 17 ಎಂದು ಮಾಯಕೋಡ್ 666 ಬರೆದ ಕಡೆ ಕೆಳಗೆ ಭಗವದ್ಗೀತೆ ಅ. 16, ಶ್ಲೋಕ 14 ಎಂದು ಸಹ ಬರೆದಿದ್ದೇವೆ. ಅದನ್ನು ನೋಡಿದವರಿಗೆ ಇದು ಭಗವದ್ಗೀತೆಯಲ್ಲಿನ ವಿಷಯವೆಂದು ಸುಲಭವಾಗಿ ಅರ್ಥವಾಗುತ್ತದೆ.

ಭಗವದ್ಗೀತೆಯಲ್ಲಿ ಇಷ್ಟುದೊಡ್ಡ ರಹಸ್ಯವಿದೆ ಎಂದು ಹೊರಗೆ ಯಾವ ಹಿಂದುವಾಗಲಿ, ಯಾವ ಹಿಂದೂಸಂಸ್ಥೆಯಾಗಲಿ ಪ್ರಚಾರ ಮಾಡದಿದ್ದರು ನಾವು ಮೊಟ್ಟಮೊದಲ ಸಾರಿಗೆ ರಾಷ್ಟ್ರವ್ಯಾಪ್ತವಾಗಿ ಗೀತೆಯ ಹೆಸರನ್ನು ಪ್ರಚಾರ ಮಾಡಿದ್ದೇವೆ. ಹಾಗೆ ಮಾಡುವುದಕ್ಕೆ ನಮಗೆ ಸುಮಾರು ಐದು ಲಕ್ಷ ರೂಪಾಯಿಗಳು ಮುಗಿದುಹೋಗಿವೆ. ಅದಕ್ಕೆ ಹಿಂದುಗಳು ಎಷ್ಟೋ ಸಂತೋಷಪಡಬೇಕು. ಒಂದುವೇಳೆ ದುಃಖವಾದರೆ ಕ್ರೈಸ್ತರಿಗೆ ಆಗಬೇಕು. ಆದರೂ ಇಲ್ಲಿ ನಾವು ಅಂದುಕೊಂಡಿರುವುದಕ್ಕೆ ವಿರುದ್ಧವಾಗಿ ನಡೆದಿದೆ. ಒಂದು ವಿಧವಾಗಿ ಕ್ರೈಸ್ತರೆ ಸಂತೋಷಪಟ್ಟಿದ್ದಾರೆ. ಈತನ್ಯಾರೋ ಧೈರ್ಯವಾಗಿ ಸತ್ಯವನ್ನೇ ಹೇಳಿದ್ದಾನೆಂದು ಒಪ್ಪಿಕೊಂಡಿದ್ದಾರೆ. ಬೈಬಲ್ ಪ್ರಕಾರವೂ ಸಹ 666 ಮಾಯೆ ನಂಬರ್ ಎಂದು ಈ ವಿಷಯವು ಭಗವದ್ಗೀತೆಯಲ್ಲಿ ಮೊದಲೆ ಇರುವುದು ಸತ್ಯಕ್ಕೆ ಬಲ ಕೈಗೂಡಿಸಿದಂತೆ ಎಂದು ಅಂದುಕೊಂಡಿದ್ದಾರೆ. ಆದರೆ ಹಿಂದುಗಳು ನಾವು ಮಾಡಿದ ಕೆಲಸವನ್ನು ನೋಡಿ ಬಹಳ ದುಃಖಪಟ್ಟಿದ್ದಾರೆ. ಗೋಡೆಗಳ ಮೇಲೆ ಬರಹಗಳಲ್ಲಿ ಭಗವದ್ಗೀತೆ ಎಂದು ಇದ್ದರೂ, ಅಧ್ಯಾಯಗಳ ಸಂಖ್ಯೆ ಮತ್ತು ಶ್ಲೋಕಗಳ ಸಂಖ್ಯೆ ಇದ್ದರು. ಅದು ದೊಡ್ಡದಾಗಿ ಕಾಣಿಸದೆ ನೀಚವಾಗಿ ಕಾಣಿಸಿದೆ. ಕರ್ನೂಲು ಜಿಲ್ಲೆ ಮಹಾನಂದಿ ಹತ್ತಿರ ಅಂಟಿಸಿದ ಪೋಸ್ಟರ್ಸ್‌ನ್ನು ಕುರಿತು ಅಸಭ್ಯಕರವಾದ ಪೋಸ್ಟರ್‌ಗಳೆಂದು ಸಂಬೋಧಿಸುತ್ತಾ ವಾರ್ತಾ ಪತ್ರಿಕೆಗಳಲ್ಲಿ ನ್ಯೂಸ್ ಬರೆಯುವುದು ನಡೆದಿದೆ. ಆ ಕೆಲಸ ಮಾಡಿರುವುದು ಯಾರೋ ಅಲ್ಲ ಹಿಂದೂಮತವನ್ನು ರಕ್ಷಿಸುತ್ತೇವೆಂದು ಪರಿಷತ್‌ಗಳಾಗಿ, ಸಂಘಗಳಾಗಿ ಏರ್ಪಟ್ಟವರೆ ಹಾಗೆ ಮಾಡಿದ್ದಾರೆ. ಅದೇ ಪರಿಷತ್ ವ್ಯಕ್ತಿಗಳು ಕೆಲವರು ನಾವು ಕೊಟ್ಟಿರುವ ಅಡ್ರಸ್‌ನ್ನು ಹಿಡಿದುಕೊಂಡು ನಮ್ಮ ಮೇಲೆ ಪೋಲೀಸ್‌ಸ್ಟೇಷನ್‌ನಲ್ಲಿ ಕೇಸು ಸಹ ಇಡುವುದು ನಡೆದಿದೆ. ಹಂಪಿ ಹತ್ತಿರವಿರುವ ಅನೇಕ ದೇವಾಲಯಗಳಲ್ಲಿ ಯಾವುದೋ ಒಂದು ಆಲಯದ ಪ್ರಹರಿ (ಕಾಂಪೌಂಡ್) ಗೋಡೆಯ ಮೇಲೆ ಬರೆದಿದ್ದಾರೆಂದು ಅವರ ಆರೋಪಣೆ. ಇದು ಏನು ದೊಡ್ಡ ತಪ್ಪು ಅಲ್ಲವೆಂದು ಪೋಲೀಸರು ಹೇಳಿದಲ್ಲಿಯೂ, ಪೋಲೀಸರೆ

ಆ ಬರಹವನ್ನು ಅಳಿಸಿದಲ್ಲಿಯು ಅವರ ಮಾತನ್ನು ಸಹ ಕೇಳದಂತೆ ಹಠ ಹಿಡಿದು ಕೇಸು ಇಡಿಸಿದ್ದಾರೆ. ಆ ವಿಷಯವನ್ನು ಪೋಲಿಸರು ನಮಗೆ ತಿಳಿಸಿದರೆ, ನಮ್ಮವರು ಇಬ್ಬರು ವ್ಯಕ್ತಿಗಳು ಚೆನ್ನಾಗಿ ಜ್ಞಾನ ತಿಳಿದವರು ಹೋಗಿ ಕೋರ್ಟಿಗೆ ಹಾಜರಾಗಿ, ಅವರು ಕೇಳಿದರೆ ವಿವರ ಹೇಳಬೇಕೆಂದುಕೊಂಡಿದ್ದಾರೆ. ಆದರೆ ಅಲ್ಲಿನ ನ್ಯಾಯಾಧಿಪತಿ ವಿವರವೇನು ಕೇಳದೆಯೇ ಇಪ್ಪತ್ತುದಿನಗಳು ಜೈಲು ಶಿಕ್ಷೆ ಹೇಳಿದ್ದಾನೆ. ದೇವರ ವಿಷಯದಲ್ಲಿ ಪ್ರಾಣವನ್ನಾದರು ಸುಲಭವಾಗಿ ಕೊಡುವುದಕ್ಕೆ ಸಂಸಿದ್ಧವಾಗಿರುವ ನಮ್ಮವರು ದೇವರ ವಿಷಯದಲ್ಲಿ ಇದು ಮಾಯೆ ಉಂಟುಮಾಡುವ ಆತಂಕವೆಂದು, ನಮಗೆ ಯಾವ ಬಾಧೆ ಇಲ್ಲವೆಂದು ಸಂತೋಷವಾಗಿ ಜೈಲಿಗೆ ಹೋಗಿದ್ದಾರೆ. ನಾವು ಬರೆದ ಬರಹಕ್ಕೆ ಭಗವದ್ಗೀತೆ ಎಂದು ಹೆಸರು ಇಡುವುದರಿಂದ ಕ್ರೈಸ್ತವರಿಗೆ ದುಃಖ ಹೊಂದಿ ಅಸೂಯೆಯಿಂದ ನಮ್ಮ ಮೇಲೆ ಕೇಸುಗಳು ಇಟ್ಟಿದ್ದಾರೆಂದರೆ ಅವರು ಮತದ್ವೇಷದಿಂದ ಇಟ್ಟಿದ್ದಾರೆ ಎಂದು ನಾವು ಅಂದುಕೊಳ್ಳಬಹುದು. ಹಾಗೆ ಅಲ್ಲದೆ ಭಗವದ್ಗೀತೆ ಎಂದು ಹೆಸರಿರುವ ಬರಹವನ್ನು ನೋಡಿ ಹಿಂದುಗಳೇ ಹಿಂದುಗಳ ಮೇಲೆ ಕೇಸು ಇಡುವುದು ದೊಡ್ಡ ವಿಚಿತ್ರವೆ ಆಗುತ್ತದೆ. ಅದು ಸಹ ಹಿಂದೂಮತವನ್ನು ಉದ್ಧರಿಸಬೇಕೆನ್ನುವವರೆ ಆ ವಿಧವಾಗಿ ಮಾಡುವುದು ಮತ್ತಷ್ಟು ವಿಚಿತ್ರವಾಗುತ್ತದೆ. ಇದೆಲ್ಲವೂ ನೋಡಿದ ನಾವು ಈ ಸಂಗತಿಯನ್ನು ಕುರಿತು ಮತ್ತೊಂದು ಪ್ರತ್ಯೇಕ ಪುಸ್ತಕವನ್ನು ಬರೆಯಬೇಕೆಂದುಕೊಂಡಿದ್ದೇವೆ. ಆ ಪುಸ್ತಕವೆ ಈಗ ನೀವು ಓದುತ್ತಿರುವ ಈ ಪುಸ್ತಕ. ಕ್ರೈಸ್ತರಲ್ಲಿನ ಅಜ್ಞಾನವನ್ನು ಖಂಡಿಸುವುದಕ್ಕೆ ನಾವು ಕೆಲವು ಲಕ್ಷಗಳ ಹಣವನ್ನು ಖರ್ಚುಮಾಡಿ ರಾಷ್ಟ್ರವೆಲ್ಲ ಬರೆಸುವುದು, ಪೇಪರ್‌ಗಳು ಅಂಟಿಸುವುದು ಮಾಡಿ **"ಸೃಷ್ಟಿಕರ್ತ ಕೋಡ್ 963"** ಅನ್ನುವ ಪುಸ್ತಕವನ್ನೆ ಬಿಡುಗಡೆ ಮಾಡಿದ್ದೇವೆ. ನಾವು ಮಾಡಿದ ಕೆಲಸಕ್ಕೆ ಹಿಂದುಗಳು ಅಜ್ಞಾನವಾಗಿ ಪ್ರವರ್ತಿಸುವುದು ನೋಡಿ ಅವರಲ್ಲಿನ ಅಜ್ಞಾನ ಹೋಗುವುದಕ್ಕೆ, ಅವರಿಗೆ ಜ್ಞಾನ ತಿಳಿಯುವುದಕ್ಕೆ ನೀವು ಓದುತ್ತಿರುವ **"ಹಿಂದೂಮತ"** ಎಂಬ ಪುಸ್ತಕವನ್ನು ಬರೆಯಬೇಕಾಗಿ ಬಂದಿದೆ.

ಈ ಪುಸ್ತಕದ ಮೂಲಕ ಹಿಂದುಗಳನ್ನು ನಾವು ಪ್ರಶ್ನಿಸುವುದೇನೆಂದರೆ! ಭಗವದ್ಗೀತೆ ಎಂದು ಹೆಸರಿಟ್ಟು ಬರೆದ ಬರಹಗಳು ಅಸಭ್ಯಕರವಾಗಿ ಹೇಗೆ ಕಾಣಿಸಿವೆ? ಒಂದುವೇಳೆ ನಿಮಗೂ ಅವುಗಳಲ್ಲಿ ಏನಾದರು ಲೋಪ ಕಾಣಿಸಿದ್ದರೆ ಅಲ್ಲಿಯೇ ನಾವು ಕೊಟ್ಟಿರುವ ಅಡ್ರಸ್‌ನಿಂದ ನಮ್ಮ ಹತ್ತಿರ ಬಂದು ತಿಳಿದುಕೊಳ್ಳಬಹುದು ತಾನೆ! ಆಗಲ್ಲದೆ ವಾರ್ತಪತ್ರಿಕೆಗಳಲ್ಲಿ ಅದನ್ನು ವಾರ್ತೆಯಾಗಿ ಅಸಭ್ಯವೆಂಬ ಪದವನ್ನು ಉಪಯೋಗಿಸಿ ಬರೆಯುವುದರಿಂದ ಭಗವದ್ಗೀತೆಯನ್ನು ನೀವು ಗೌರವಿಸಿದಂತಾಗುತ್ತದಾ? ಇದು ಪ್ರತ್ಯೇಕಿಸಿ ಮಹಾನಂದಿ ಹತ್ತಿರ ಇರುವವರನ್ನು ಕೇಳುವ ಪ್ರಶ್ನೆಗಳು ಅಂದುಕೊಳ್ಳಿ. ಇನ್ನು ಪೋಲೀಸ್ ಸ್ಟೇಷನಲ್ಲಿ ಕೇಸುಹಾಕಿ ಶಿಕ್ಷೆ ಹಾಕಿಸಿದ ಹಂಪಿಯವರನ್ನು ಕೇಳುವುದೇನೆಂದರೆ. ದೇವಾಲಯ ಆವರಣದ (ಕಾಂಪೌಂಡ್) ಗೋಡೆಗೆ ಬರೆಯುವುದು ಕಾನೂನಿನ ಪ್ರಕಾರ ತಪ್ಪೆಂಬ ಉದ್ದೇಶದಿಂದ ನೀವು ಕೇಸು ಇಟ್ಟಿದ್ದೀರಾ. ಈಗ ನಾವು ಮಾಡಿರುವುದು ತಪ್ಪು ಹೇಗೆ ಆಗುತ್ತದೆಂದು ಪ್ರಶ್ನಿಸಬೇಕಾಗಿ ಬಂದಿದೆ. ನಾವು ದೇವರ ಗುಡಿ ಆವರಣದ ಕಾಂಪೌಂಡ್ ಗೋಡೆಯ ಮೇಲೆ ಸಿಗರೇಟ್‌ಗಳ ಪ್ರಚಾರ ಬರೆದಿದ್ದರೇನೋ ಇಲ್ಲವೇ ವ್ಯಾಪಾರಪ್ರಕಟಣೆಗಳು ಬರೆದಿದ್ದರೇನೋ ತಪ್ಪಾಗುತ್ತದೆ. ಆದರೆ ದೇವರ ಗುಡಿ ಮೇಲೆ ಭಗವದ್ಗೀತೆಯ ವಾಕ್ಯ ಬರೆಯುವುದು ತಪ್ಪಾ ಎಂದು ಪ್ರಶ್ನಿಸುತ್ತಿದ್ದೇನೆ. ಅದು ಸಹ ಅಲ್ಲಿರುವ ನಿಯಮಗಳು ತಿಳಿಯದೆ ಬರೆಯುವುದು ನಡೆದಿದೆಯಾಗಲಿ ತಿಳಿದು ಬಲವಂತವಾಗಿ ಬರೆಯಲಿಲ್ಲ. ಅಲ್ಲಿ ಮಾಡಿರುವುದು ಸಮಾಜಕ್ಕೆ ಒಳ್ಳೆಯದನ್ನು ಮಾಡುವುದಾ, ಕೆಟ್ಟದನ್ನು ಮಾಡುವುದಾ ಎಂದು ಯೋಚಿಸದೆಯೇ ಅದನ್ನು ತಪ್ಪಾಗಿ ಹೇಗೆ ಭಾವಿಸಿದ್ದೀರ? ಒಂದುವೇಳೆ ಕಾನೂನಿನ ಪ್ರಕಾರ ಇದು ತಪ್ಪೇ ಎಂದು ನ್ಯಾಯಸ್ಥಾನ ನಿರ್ಣಯಿಸಿದರೆ, ಅದಕ್ಕೆ ನೂರೋ ಇನ್ನೂರೋ ಜರಿಮಾನಾ ವಿಧಿಸಬಹುದಾಗಲಿ ಅದೇನೋ ದೊಡ್ಡ ತಪ್ಪಾದಂತೆ ನಾಲ್ಕುಸಾವಿರ ರೂಪಾಯಿಗಳನ್ನು ಜರಿಮಾನಾ ವಿಧಿಸುವುದು, ಹಣವನ್ನು ಕಟ್ಟಲಾಗದಿದ್ದರೆ 20 ದಿನಗಳು ಜೈಲುಶಿಕ್ಷೆ ಹಾಕುವುದು ಸಮಂಜಸವೇನಾ ಎಂದು ಪ್ರಶ್ನಿಸುತ್ತಿದ್ದೇವೆ. ಅದೇ ನೇರವಾದರೆ ಅದು ಅಷ್ಟು

ಶಿಕ್ಷಾರ್ಹಿತವಾದರೆ ಕ್ರೈಸ್ತರ ಚರ್ಚಿಗಳ ಪ್ರಹರಿ ಗೋಡೆಗಳ ಸುತ್ತಾ ಪ್ರಭುವೆ ನಿಜವಾದ ದೇವರೆಂದು, ಪ್ರಭುವು ಪಾಪಿಗಳನ್ನು ರಕ್ಷಿಸುತ್ತಾನೆಂದು ಅನೇಕವಾದ ಬೈಬಲ್ ವಾಕ್ಯಗಳು ಬರೆದಿರುತ್ತಾರೆ ಅದು ಸಹ ಕಾನೂನಿನ ಪ್ರಕಾರ ತಪ್ಪೇ ತಾನೆ! ಒಂದುವೇಳೆ ಕ್ರೈಸ್ತನೆ ನ್ಯಾಯಾಧಿಪತಿಯಾಗಿದ್ದು ಅದನ್ನು ತಪ್ಪೆಂದು ಬರೆದರು ಕ್ರೈಸ್ತರಿಗೆ ಜೈಲುಶಿಕ್ಷೆ ವಿಧಿಸಿದರೆ ಕ್ರೈಸ್ತರು ಆ ನ್ಯಾಯಾಧಿಪತಿಯನ್ನು ಅವರ ಮತದಿಂದಲೇ ಹೊರಹಾಕುತ್ತಾರೆ. ಗತಕಾಲದಲ್ಲಿ ಬರ್ನ್ನಾಲಾ ಅನ್ನುವ ಸಿಕ್ಕು ಮುಖ್ಯಮಂತ್ರಿ ಯಾಗಿರುವಾಗ ಕಾನೂನೆಂದು ಸಿಕ್ಕರಿಗೆ ವಿರುದ್ಧವಾದ ಕೆಲಸ ಮಾಡಿದರೆ ಸಿಕ್ಕು ಗುರುಗಳು ಮುಖ್ಯಮಂತ್ರಿಯಾಗಿರುವ ಬರ್ನ್ನಾಲಾಗೆ ಶಿಕ್ಷೆಹಾಕಿ ಅವರ ಸ್ವರ್ಣ ದೇವಾಲಯದ ಮುಂದೆ ಬಂದು ಹೋಗುವ ಭಕ್ತರ ಚಪ್ಪಲಿಗಿರುವ ದೂಳನ್ನು ಹೊರೆಸುವಂತೆ ಮಾಡಿದ್ದಾರೆ. ಇತರ ಮತಗಳಲ್ಲಿ ದೊಡ್ಡ ಜ್ಞಾನ ಇಲ್ಲದಿದ್ದರು ಅವರು ಎಷ್ಟೋ ಕ್ರಮಶಿಕ್ಷಣದಿಂದ ದೇವರ ಬಗ್ಗೆ ಪ್ರವರ್ತಿಸುತ್ತಿದ್ದರೆ ಹಿಂದುಗಳು ಏಕೆ ಹೀಗೆ ಇಳಿಜಾರಿಹೋಗುತ್ತಿದ್ದಾರೆ? ಎಲೆಕ್ಷನ್ ಸಮಯದಲ್ಲಿ ಕಾಣಿಸಿದ ಗೋಡೆಗಳ ಮೇಲೆಲ್ಲವೂ ಬರೆಯುವ ನಾಯಕರ ಮೇಲೆ ಕೇಸುಗಳು ಇಡಲಾರದ ನೀವು ಭಗವದ್ಗೀತೆ ವಾಕ್ಯವನ್ನು ತಪ್ಪಾಗಿ ಭಾವಿಸಿ ಕೇಸುಗಳು ಹಾಕುವುದು, ಆ ಬರಹವನ್ನು ಅಸಭ್ಯಕರವಾದವೆಂದು ನ್ಯೂಸ್‌ಪೇಪರ್‌ಗಳಿಗೆ ಹಾಕುವುದು ಒಳ್ಳೆಯದೇನಾ? ಹಿಂದೂಮತವನ್ನು ರಕ್ಷಿಸುವ ನೀವೆ ಯೋಚಿಸಿಕೊಳ್ಳಿ.

ನಾವು ಮಾಡಿದ ಪ್ರಚಾರ ಹಿಂದುಗಳು ಕೆಟ್ಟದಾಗಿ ಗುರುತಿಸಿದ್ದಾರೆಂದು, ಶಿಕ್ಷೆಗಳು ಹಾಕಿಸಿದ್ದಾರೆಂದು ತಿಳಿದುಕೊಂಡ ಇತರ ಮತಗಳಲ್ಲಿ ಒಂದು ಮತದವರು ನಮ್ಮ ಹತ್ತಿರಕ್ಕೆ ಬಂದು "ನಿಮ್ಮ ಮತದಲ್ಲಿ ಜ್ಞಾನವಿಲ್ಲವೆಂದು ಇವತ್ತಿಗಾದರು ಒಪ್ಪಿಕೊಳ್ಳುತ್ತಿರಾ" ಎಂದು ನಮ್ಮನ್ನು ಕೇಳುತ್ತಿದ್ದಾರೆ. ಎಷ್ಟೋ ಜ್ಞಾನವಿರುವ ನೀವು ನಮ್ಮ ಮತದೊಳಗೆ ಬನ್ನಿ ನಿಮ್ಮನ್ನು ನಾವು ಎಷ್ಟೋ ಗೌರವಿಸುತ್ತೇವೆ. ನಿಮ್ಮ ಮಾತು ಕೇಳುವವರು ನಮ್ಮ ಸಂಘದಲ್ಲಿರುವವರು ಸುಮಾರು ಹತ್ತುಸಾವಿರ ಜನರಿದ್ದಾರೆ ಅಲ್ಲವೆ! ನೀವೆಲ್ಲರೂ ನಮ್ಮ ಮತದೊಳಗೆ

ಬಂದರೆ ನಿಮ್ಮನ್ನು ಬಹಳ ಗೌರವವಾಗಿ ನೋಡಿಕೊಳ್ಳುತ್ತೇವೆ. ನಿಮ್ಮ ಮತದೊಳಗಿಲ್ಲದ ಗೌರವ ಗುರುತು ನಾವು ನಮ್ಮ ಮತದಲ್ಲಿ ಕೊಡುತ್ತೇವೆನ್ನುತ್ತಿದ್ದಾರೆ. ಮತ್ತೊಂದು ಮತದವರು ಬಂದು ನಮ್ಮ ಮತದಲ್ಲಿ ದೇವರಿಗಾಗಲಿ ದೇವರು ಹೇಳಿದ ಮಾತುಗಳನ್ನಾಗಲಿ ಯಾರಾದರು ಅಗೌರವವಾಗಿ ಮಾತನಾಡಿದರೆ ಅವನು ಪ್ರಧಾನಮಂತ್ರಿ ಆದರೂ ಬಿಡದೆ ಸಾಯಿಸಿ ಬಿಡುತ್ತೇವೆಂದು, ದೇವರಿಗೆ ವಿರುದ್ಧವಾದ ಚಿಕ್ಕ ಸಮಸ್ಯೆಗೂ ಸಹ ನಮ್ಮ ಮತದಲ್ಲಿರುವವರೆಲ್ಲರೂ ಏಕದಾಟಿಯಾಗಿ ಮೇಲೆ ಬರುತ್ತಾರೆಂದು, ದೇವರ ಮೇಲೆ ಹೆಚ್ಚಾಗಿ ವಿಶ್ವಾಸವಿರುವ ನಮ್ಮ ಮತದಲ್ಲಿ ನೀವು ಸೇರಿರೆಂದು ಕರೆಯುತ್ತಿದ್ದಾರೆ.

**ಅವರು ನಮ್ಮ ಮೇಲೆ ಅಭಿಮಾನದಿಂದ ಹಾಗೆ ಕರೆಯುವುದು ಸಂತೋಷವೇ. ಆದರೆ ನಮಗೆ ಮತ ಮುಖ್ಯವಲ್ಲ. ಪಥವು ಮುಖ್ಯವಾದ್ದರಿಂದ ಯಾರ ಮಾತನ್ನು ನಾನು ಕೇಳಬೇಕೆಂದುಕೊಂಡಿಲ್ಲ**. ಮತ ಮಧ್ಯದಲ್ಲಿ ಬಂದಿದೆ ಎಂದು ಅದಕ್ಕೆ ಪ್ರಾಧಾನ್ಯತೆ ಕೊಡಲಿಲ್ಲ. ಒಂದುವೇಳೆ ಹಿಂದೂಗಳು ನಮ್ಮ ಬಗ್ಗೆ ವ್ಯವಹರಿಸಿದ ಪದ್ಧತಿಗೆ, ನಾವು ಇತರ ಮತದಲ್ಲಿ ಸೇರುವುದಕ್ಕೆ ಅಂಗೀಕರಿಸಿದ್ದರೆ ನನ್ನಜೊತೆ ಹತ್ತುಸಾವಿರ ಜನರು ನನ್ನನ್ನು ಅನುಸರಿಸಿ ಇತರ ಮತದೊಳಗೆ ಬರುವವರು ತಾನೆ! ಆಗ ಹಿಂದುಮತ ಹಿಂದೂರಕ್ಷಣ ಸಂಸ್ಥೆಗಳಿಂದ ರಕ್ಷಿಸಲ್ಪಟ್ಟಿದೆಯಾ? ಭಕ್ಷಿಸಲ್ಪಟ್ಟಿದೆಯಾ? ಓದುತ್ತಿರುವ ನೀವೇ ಯೋಚಿಸಿ ಹೇಳಿರಿ. ಹಿಂದುಗಳು ನಮ್ಮ ಮತ ಕ್ಷೀಣಿಸಿಹೋಗುತ್ತಿದೆ, ಅದನ್ನು ರಕ್ಷಿಸಿಕೊಳ್ಳಬೇಕೆಂದು ಗುಂಪುಗಳಾಗಿ ಸಂಸ್ಥೆಗಳಾಗಿ ಏರ್ಪಡುವುದು ಒಳ್ಳೆಯದೇ ಆದರೆ ಅವರಲ್ಲಿ ದೈವಜ್ಞಾನ ಇಲ್ಲದಿರುವುದರಿಂದ ಏನನ್ನಾದರೆ ರಕ್ಷಿಸಬೇಕೆಂದು ಕೊಂಡಿದ್ದಾರೋ ಅದನ್ನೇ ಭಕ್ಷಿಸಿದಂತಾಗಿದೆ. ದೇವರ ಗುಡಿ ಮೇಲೆ ದೇವರ ವಾಕ್ಯಗಳಿರುವುದು ಒಳ್ಳೆಯದೇ ಎಂದು ಹಿಂದೂಪರಿಷತ್‌ರವರು ಅಂದುಕೊಳ್ಳದಿರುವುದು ಮತಭಕ್ಷಣೆ ಅಲ್ಲದೆ, ಮತ ರಕ್ಷಣ ಹೇಗೆ ಆಗುತ್ತದೆ? ಖೈದಿಗಳು ಸಿಗಲಿಲ್ಲವೆಂದು ಎಷ್ಟೋ ಕೇಸುಗಳನ್ನು ಪೆಂಡಿಂಗ್‌ನಲ್ಲಿಡುವ ಪೋಲೀಸರು

ನಮ್ಮವರನ್ನು ಕೋರ್ಟಿಗೆ ತೆಗೆದುಕೊಂಡು ಹೋಗುವುದರಿಂದ ಇದು ನಮ್ಮ ಮತವೆಂದು ನಾವು ಹೇಳಿಕೊಳ್ಳುವುದಕ್ಕು ಸಹ ನಮಗೆ ನಾಚಿಕೆಯಾಗಿದೆ. ಒಂದು ಕೇಸನ್ನು ಎಷ್ಟೋ ವಿಚಾರಣೆ ನಡೆಸಿ ಒಂಭತ್ತು ಜನರು ಸಾಕ್ಷಿಗಳು ಸಾಕ್ಷಿ ಹೇಳಿದಲ್ಲಿಯೂ ಹತ್ತನೆಯ ಸಾಕ್ಷಿ ಸ್ವಲ್ಪ ಸರಿಯಾಗಿ ಹೇಳಲಿಲ್ಲವೆಂಬ ಚಿಕ್ಕ ಕಾರಣನಿಂದ, ಕೇಸನ್ನು ಹೊಡೆದುಹಾಕುವ ನ್ಯಾಯಾಧಿಪತಿಗಳು ವಿಚಾರಣೆ ನಡೆಸದೆ, ಖೈದಿಗಳಾಗಿ ನಿಲ್ಲಿಸಿದರು ಅವರ ಸಮಾಧಾನವೇನೋ ನೋಡದಂತೆ, ದೊಡ್ಡ ಕೇಸಿಗೆ ಶಿಕ್ಷೆ ಹೇಳಿದಂತೆ ಹೇಳುವುದು ಇತರ ಮತಗಳ ಮುಂದೆ ಹಿಂದೂಮತವು ತಲೆ ಬಗ್ಗಿಸಿಕೊಳ್ಳುವ ಕೆಲಸ ಅಲ್ಲವೆ! ಇದೆಲ್ಲವನ್ನು ನೋಡಿದರೆ ಹಿಂದೂಮತವು ಕ್ಷೀಣಿಸಿಹೋಗದೆ ಅಭಿವೃದ್ಧಿ ಹೇಗೆ ಆಗುತ್ತದೆ?

ಯಾವ ಮತದಲ್ಲಿಯಾದರು ದೇವರಜ್ಞಾನ, ದೇವರ ಮೇಲೆ ವಿಶ್ವಾಸ ಇಲ್ಲದಿದ್ದರೆ ಅದು ಕ್ಷೀಣಿಸದೆ ಅಭಿವೃದ್ಧಿ ಆಗುವುದಿಲ್ಲ. ಇಂದು ದೇವರ ಜ್ಞಾನವಾಗಲಿ, ದೇವರ ಮೇಲೆ ವಿಶ್ವಾಸವಾಗಲಿ ಹಿಂದೂಮತದಲ್ಲಿ ಇಲ್ಲದಂತೆ ಹೋಗಿದೆ. ಆದ್ದರಿಂದ ಹಿಂದೂಮತ ಕ್ಷೀಣದಶೆಯಲ್ಲಿದ್ದು ಕ್ರೈಸ್ತವ, ಇಸ್ಲಾಮ್ ಮತಗಳು ಅಭಿವೃದ್ಧಿ ಹೊಂದುತ್ತಿವೆ. ಹಿಂದೂಮತ ಅಭಿವೃದ್ಧಿ ಹೊಂದಬೇಕೆಂದರೆ ನಮ್ಮ ಸಲಹೆ ಏನೆಂದರೆ! ಮತ ಅನ್ನುವ ಪದ ಪಥ ಅನ್ನುವ ಪದವಾಗಿ ಬದಲಾಯಿಸಿಕೊಳ್ಳಬೇಕು. ಹಾಗೆ ಹಿಂದೂ ಅನ್ನುವ ಪದವನ್ನು ಇಂದೂ ಅನ್ನುವ ಪದವಾಗಿ ಬದಲಾಯಿಸಿಕೊಳ್ಳಬೇಕು. ದೇವರಿಗೆ ಹತ್ತಿರವಾಗಿ ಹೋಗಬೇಕೆಂದರೆ ಯಾವ ಮತವಾದರು ಮತ ಅನ್ನುವ ಮಾತನ್ನು ಬಿಟ್ಟು ಪಥ ಅನ್ನುವ ಮಾತಾಗಿ ಬದಲಾಯಿಸಿಕೊಳ್ಳಬೇಕು. ಆಗ ಮಾಯೆಯಿಲ್ಲದ ಸ್ವಚ್ಛವಾದ ಜ್ಞಾನ ಎಲ್ಲರಲ್ಲಿಯೂ ನಿಲ್ಲುತ್ತದೆ. ನಾವು ಹೇಳುವುದು ದೇವರ ಜ್ಞಾನಮಾರ್ಗವಾದ್ದರಿಂದ ಅಸೂಯೆಯಿಲ್ಲ ದಂತೆ ಸ್ವಾಮಿಗಳು ಸಹಿತ ಈ ವಿಷಯವನ್ನು ಅವಗಾಹನ ಮಾಡಿಕೊಳ್ಳುತ್ತಾರೆಂದು ತಿಳಿಯುತ್ತಿದ್ದೇವೆ, ನಾವು ಮತದಲ್ಲಿ ಇಲ್ಲ ಪಥದಲ್ಲಿ ಇದ್ದೇವೆಂದು ಎಲ್ಲರೂ ಪಥವನ್ನು ಅನುಸರಿಸಬೇಕು.

**ಮತವನ್ನು ನಿರ್ವೀರ್ಯ ಮಾಡುತ್ತಾ ಪಥವನ್ನು ಬಲಪಡಿಸುತ್ತಾ ನಾವು ಬರೆದ ಕೆಲವು ವಾಕ್ಯಗಳನ್ನು ಕೆಳಗೆ ಜೋಡಿಸುತ್ತಿದ್ದೇವೆ.**

1. ಮತ ವೈಷಮ್ಯಗಳ ಮಾಯೆಯಲ್ಲಿ ಬೀಳದೆ ಮಹೋನ್ನತ ಭಾವವನ್ನು ಬೆಳಸಿಕೊ! ಆತ್ಮ ಅನ್ನುವ ಶಿಖರವನ್ನು ಅಧಿರೋಹಿಸುತ್ತೀಯಾ. (ಏರಬಹುದು)

2. ದೇವರು ಮತಗಳನ್ನು, ಕುಲಗಳನ್ನು ಸೃಷ್ಟಿಸಲಿಲ್ಲ.

3. ಮತಗಳನ್ನನುಸರಿಸಿ ಅನೇಕ ವಿಧಾನಗಳಾಗಿ, ಅನೇಕ ಹೆಸರುಗಳಾಗಿ, ಬೇರೆ ಬೇರೆಯಾಗಿ ಕರೆಯಲ್ಪಡುವವನು ಒಬ್ಬ ದೇವರೆ.

4. ಮಾಯ (ಸೈತಾನ್) ಇಲ್ಲವೆ ಸಾತಾನ್ ಮಾನವನನ್ನು ಮತಗಳ ಹೆಸರಿನಿಂದ ಮಭ್ಯವಿರಿಸುತ್ತಿದೆ. (ಸಂದಿಗ್ಧತೆಯಲ್ಲಿ ಇರಿಸುತ್ತದೆ)

5. ಮತವು ದೇವರನ್ನು ತಿಳಿಸುವುದಿಲ್ಲ. ಜ್ಞಾನವೇ ದೇವರನ್ನು ತಿಳಿಸುತ್ತದೆ.

6. ದೇವರು ಒಂದುಮತಕ್ಕೆ ಸಂಬಂದಿಸಿದವನು ಅಲ್ಲ.

7. ಮತದ ಮರೆಯಲ್ಲಿ ದೇವರನ್ನು ಊಹಿಸಿಕೊಂಡು, ಮತಕ್ಕೆ ದೇವರನ್ನು ಪರಿಮಿತಿ ಮಾಡಿ ಮಾತನಾಡುವುದು ಅಜ್ಞಾನವೇ ಆಗುತ್ತದೆ. ಎಲ್ಲ ಮತ ಗಳಿಗೂ ಅಧಿಪತಿ ಒಬ್ಬ ದೇವರೆಂದು ತಿಳಿಯುವುದೆ ಜ್ಞಾನವಾಗುತ್ತದೆ.

8. ಹುಟ್ಟಿದ ನಂತರ ಸ್ವಲ್ಪ ಕಾಲಕ್ಕೆ ತಿಳಿಯುವಂತಹ ಕುಲ, ಮತ ಮನುಷ್ಯರು ಕಲ್ಪಿಸಿಕೊಂಡಿರುವವೆ ಆಗಲಿ ಜನ್ಮತಃ ಬಂದಿರುವವು ಅಲ್ಲ.

9. ಕುಲಗಳು ಕುಚ್ಚಿತದಿಂದ, ಮತಗಳು ಸ್ವಾರ್ಥದಿಂದ ಕೂಡಿಕೊಂಡಿವೆ. ಕುಲಗಳಿಗೂ ಮತಗಳಿಗೂ ದೇವರು ಅತೀತವಾಗಿದ್ದಾನೆಂದು ತಿಳಿದು ನೀನು ಆ ವಿಧವಾಗಿ ಬದಲಾದಾಗಲೆ ದೇವರು ತಿಳಿಯುತ್ತಾನೆ.

10. ಯಾವ ಮತಕ್ಕೆ ಸೇರಿದ ಮನುಷ್ಯನಲ್ಲಾದರು ಮೂಗಿನರಂಧ್ರಗಳಲ್ಲಿ ಚಲಿಸುವ ಶ್ವಾಸಗಳಲ್ಲಿ "ಓಮ್" ಶಬ್ದವು ಅಡಕವಾಗಿದೆ.

11. "ಓಮ್" ಒಂದು ಮತಕ್ಕೆ ಸಂಬಂಧಿಸಿರುವುದು ಅಲ್ಲ. ಮನುಷ್ಯರೆಲ್ಲರಿಗೂ, ಜೀವರಾಶಿಗಳೆಲ್ಲರಿಗೂ ಸಂಬಂಧಿಸಿರುವುದು.

12. ನನ್ನದು ಅಂದುಕೊಳ್ಳುವ ನಿನ್ನ ಮತ ಯಾವುದೊ ನಿನಗೆ ನಿಜವಾಗಲು ತಿಳಿದಿದೆಯಾ? ಮಧ್ಯದಲ್ಲಿ ಏನಾದರು ಬದಲಾಗಿದೆಯೆನೋ?

13. ನಿನಗೆ ತಿಳಿಯದೆಯೇ ಎಂದಿಗೂ ಬದಲಾಗದ ಮತದಲ್ಲಿ, ಎಂದಿಗೂ ಬದಲಾಗದ ಕುಲದಲ್ಲಿ ನೀನು ಇದ್ದೀಯಾ.

14. ನೀನು ಎಂದಿಗೂ ಬದಲಾಗದ ಜೀವಕುಲದಲ್ಲಿ ಇದ್ದೀಯಾ. ಹಾಗೆಯೇ ಎಂದಿಗೂ ಬದಲಾಗದ ದೈವ ಮತದಲ್ಲಿ ಇದ್ದೀಯಾ.

15. ಪರಮತವನ್ನು ಕುರಿತು ಮಾತನಾಡಬೇಕೆಂದುಕೊಂಡರೆ ಮೊದಲು ನಿನ್ನ ಮತವನ್ನು ಕುರಿತು ನೀನು ಯೋಚಿಸು. ಪರಮತದಲ್ಲಿ ಲೋಪವೇನೋ? ನಿನ್ನ ಮತದಲ್ಲಿನ ದೊಡ್ಡತನವೇನೋ? ನ್ಯಾಯವಾಗಿ, ನೀತಿಯಾಗಿ ನಿರ್ಣಯಿಸಿಕೊ.

16. ಪರಮತವನ್ನು ಕುರಿತಾಗಲಿ, ನಿನ್ನ ಮತವನ್ನು ಕುರಿತಾಗಲಿ, ಸ್ವಾರ್ಥಬುದ್ಧಿಯಿಂದಾಗಲಿ, ರಾಜಕೀಯವಾಗಿ ಆಗಲಿ, ಸಮಾಜಪರವಾಗಿ ಆಗಲಿ ಯೋಚಿಸಬೇಡ.

17. ಒಂದುವೇಳೆ ನಿನ್ನ ಮತ ದೊಡ್ಡದಾಗಿ, ಪರಮತವು ನೀಚವಾಗಿ ಕಾಣಿಸಿದರೆ, ಮತವನ್ನು ಕುರಿತು ಬಿಟ್ಟು, ಮತದ ಪ್ರಸಕ್ತಿ ಇಲ್ಲದಂತೆ ಕೇವಲ ದೇವರನ್ನು ಕುರಿತೆ ಬೋಧಿಸು, ದೇವರು ಎಲ್ಲಾ ಮತಗಳಿಗೂ ದೊಡ್ಡವನು ಆದ್ದರಿಂದ ಯಾವ ಮತಸ್ಥನಾದರೂ ನಿನ್ನ ಮಾತನ್ನು ಕೇಳುತ್ತಾನೆ.

18. ಒಂದುವೇಳೆ ಪರಮತ ದೊಡ್ಡದಾಗಿ, ನಿನ್ನ ಮತ ನೀಚವಾಗಿ ಕಾಣಿಸಿದರೆ, ನೀನು ಮತವನ್ನು ಮಾತ್ರ ಬದಲಿಸಬೇಡ. ನಿನ್ನನ್ನು ಈ ಮತದಲ್ಲಿಯೇ ದೇವರು ಏಕೆ ಹುಟ್ಟಿಸಿದ್ದಾನೋ ಯೋಚಿಸು. ಆಗ ಮತ ಚಿಂತೆಹೋಗಿ ದೈವ ಚಿಂತೆ ಉಂಟಾಗುತ್ತದೆ.

19. ಮತ ಅನ್ನುವ ಹೆಸರು ಪ್ರತಿ ವರ್ಗದಲ್ಲಿಯೂ ಇದೆ. ನಿನ್ನದು ಒಂದು ಹೆಸರು ಹೊಂದಿದ ಮತವಾದರೆ, ಮತ್ತೊಬ್ಬನದು ಇನ್ನೊಂದು ಹೆಸರು ಹೊಂದಿದ ಮತವಾಗಿರುತ್ತದೆ. ಮತದಲ್ಲಿ ನಿನ್ನನ್ನು ದೇವರೇ ಹುಟ್ಟಿಸಿದ್ದಾನೆ. ಆದರೆ ನೀನು ಕೋರಿ ಯಾವ ಮತದಲ್ಲಿ ಹುಟ್ಟಲಿಲ್ಲ.

20. ನಿನ್ನನ್ನು ಒಂದು ಮತದಲ್ಲಿ ಹುಟ್ಟಿಸಿ, ಇನ್ನೊಬ್ಬನನ್ನು ಮತ್ತೊಂದು ಮತದಲ್ಲಿ ದೇವರೇ ಹುಟ್ಟಿಸಿದ್ದಾನೆ. ಹಾಗೆ ನಿನ್ನನ್ನು ಇನ್ನೊಬ್ಬನನ್ನು ಹುಟ್ಟಿಸಿರುವುದು ಒಬ್ಬ ದೇವರೆ! ನೀನು ಹುಟ್ಟಿದ ನಂತರ ದೇವರಿಗೆ ನೀನೆ ಹೆಸರುಗಳು ಇಡುತ್ತಿದ್ದೀಯಾ. ನಿಜವಾಗಲು ದೇವರಿಗೆ ಹೆಸರಿಲ್ಲ, ಆಕಾರ ಅಷ್ಟಕ್ಕು ಇಲ್ಲ.

21. ಮತಗಳಿಗೆ ಅತೀತವಾಗಿ, ಹೆಸರುಗಳಿಗೆ ಅತೀತವಾಗಿ, ರೂಪಗಳಿಗೆ ಅತೀತವಾಗಿ, ಕ್ರಿಯೆಗಳಿಗೆ ಅತೀತವಾಗಿ ಯಾವನಾದರೇ ಇದ್ದಾನೋ ಅವನೇ ನಿಜವಾದ ದೇವರು. ಆತನೇ ನಿನ್ನನ್ನು ಈ ಪ್ರಪಂಚವನ್ನು ಸೃಷ್ಟಿಸಿದವನು.

22. ದೇವರು ಮನುಷ್ಯನನ್ನು ಮಾಯೆಯಲ್ಲಿ ಹುಟ್ಟಿಸಿ ನಂತರ ತನ್ನ ಹತ್ತಿರಕ್ಕೆ ಬರುತ್ತಾನೋ ಇಲ್ಲವೋ, ತನ್ನನ್ನು ಗುರುತಿಸುತ್ತಾನೋ ಇಲ್ಲವೋ ನೋಡಬೇಕೆಂದುಕೊಂಡಿದ್ದಾನೆ. ಆ ಪ್ರಕ್ರಿಯೆಯಲ್ಲಿ ಮೊದಲನೆಯದೆ ನಿನ್ನನ್ನು ಒಂದು ಮತದಲ್ಲಿ ಹುಟ್ಟಿಸುವುದು. ಚೆನ್ನಾಗಿ ನೋಡಿಕೊಂಡರೆ ನೀನು ಪ್ರಸ್ತುತ ಮಾಯೆಯಲ್ಲಿ ಇದ್ದೀಯಾ. ದೇವರ ಕಡೆ ಹೋಗು!

23. ನಿನಗೆ ಒಂದು ಹೆಸರನ್ನು, ನಿನಗೆ ಒಂದು ಕುಲವನ್ನು, ಹಾಗೆಯೇ ಒಂದು ಮತವನ್ನು ಇತರರೇ ನಿನಗೆ ಮೊದಲು ಅಂಟಿಸಿದ್ದಾರೆ. ದೇವರಿಗೆ ಹೆಸರಿದಿಯಾ? ಕುಲ ಇದೆಯಾ? ಮತ ಇದೆಯಾ? ಅವುಯಾವುವು ಇಲ್ಲ. ಅವು ಇಲ್ಲದವನನ್ನು ತಿಳಿದುಕೊಳ್ಳಬೇಕೆಂದರೆ ನೀನು ನಿನ್ನ ಹೆಸರನ್ನೂ, ಕುಲವನ್ನೂ ಮತವನ್ನೂ ದೇವರ ವಿಷಯದಲ್ಲಿ ದೂರವಾಗಿ ಇಟ್ಟುಕೋ.

24. ನೀನು ಯಾವ ಮತವನ್ನು ಸಮರ್ಥಿಸಬೇಡ. ದೇವರನ್ನು, ದೇವರ ಜ್ಞಾನವನ್ನು ಮಾತ್ರ ಸಮರ್ಥಿಸು.

25. ನಿನ್ನ ಇಷ್ಟದಿಂದ ಕೂಡಿಕೊಂಡಿರುವುದು ಮತ. ದೇವರ ಇಷ್ಟದಿಂದ ಕೂಡಿಕೊಂಡಿರುವುದು ಜ್ಞಾನ.

26. ಮತವನ್ನು ಮನುಷ್ಯ ಸೃಷ್ಟಿಸಿದ್ದಾನೆ. ಜ್ಞಾನವನ್ನು ದೇವರು ಸೃಷ್ಟಿಸಿದ್ದಾನೆ.

27. ಮನುಷ್ಯ ಸೃಷ್ಟಿಸಿದ ಮತ ಇಹಕ್ಕೆ ಸಂಬಂಧಿಸಿರುವುದು. ದೇವರು ಸೃಷ್ಟಿಸಿದ ಜ್ಞಾನ ಪರಕ್ಕೆ ಸಂಬಂಧಿಸಿರುವುದು.

28. ಮನುಷ್ಯ ಸೃಷ್ಟಿಸಿದ ಮತವನ್ನು ಹಿಡಿದುಕೊಂಡು ಇಹದಲ್ಲಿ ಇರುತ್ತೀಯೋ, ದೇವರು ಸೃಷ್ಟಿಸಿದ ಜ್ಞಾನವನ್ನು ಹಿಡಿದುಕೊಂಡು ಪರಕ್ಕೆ ಹೋಗುತ್ತೀಯೋ ನೀನೇ ನಿರ್ಣಯಿಸಿಕೊ.

29. ಮತವು ಮನುಷ್ಯರ ಗುಂಪನ್ನು ಬೆಳೆಸುತ್ತದೆ. ಜ್ಞಾನ ಕೇವಲ ಜ್ಞಾನಿಗಳ ಗುಂಪನ್ನು ಬೆಳೆಸುತ್ತದೆ.

30. ಮತವನ್ನು ಯಾವ ಮನುಷ್ಯನಲ್ಲಿಯಾದರು ನೋಡಬಹುದು. ಜ್ಞಾನವನ್ನು ಕೆಲವರಲ್ಲಿಯೇ ನೋಡಬಹುದು.

31. ಪ್ರತಿ ಮನುಷ್ಯ ಮತಕ್ಕೆ ಸಂಬಂಧಿಸಿದವನೇ. ಆದರೆ ಪ್ರತಿ ಮನುಷ್ಯ ಜ್ಞಾನಕ್ಕೆ ಸಂಬಂಧಿಸಿ ಇರುವುದಿಲ್ಲ.

32. ಮತವನ್ನು ಬೋಧಿಸುವವರು ಮತಗುರುಗಳು ಎಷ್ಟೋಜನ! ಜ್ಞಾನವನ್ನು ಬೋಧಿಸುವವನು ಜ್ಞಾನಗುರುವು ಒಬ್ಬನೇ!!

33. ಮತವು ಮನುಷ್ಯನ ಹುಟ್ಟುವಿಕೆಯಿಂದಲೇ ಇರುತ್ತದೆ. ಇದು ನನ್ನ ಮತವೆಂದು ಎಲ್ಲರಿಗೂ ತಿಳಿದಿದೆ. ಆದರೆ ದೈವಜ್ಞಾನ ಹುಟ್ಟಿನಿಂದ ಇರುವುದಿಲ್ಲ. ಮಧ್ಯದಲ್ಲಿ ಜ್ಞಾನ ತಿಳಿದರು ಅದು ಎಲ್ಲರಿಗೂ ಇಷ್ಟವಾಗುವುದಿಲ್ಲ.

34. ಮತ ಎಂದರೆ ಮಾರ್ಗ ಅಲ್ಲದಿರುವುದೆಂದು ಅನುಭವದಿಂದಲೆ ತಿಳಿಯುತ್ತದೆ.

35. ಪಥ ಎಂದರೆ ಮಾರ್ಗವಾಗಿದೆ ಎಂದು ಅರ್ಥದಲ್ಲಿಯೇ ತಿಳಿಯುತ್ತದೆ.

36. ಒಂದು ಮತದಲ್ಲಿನ ಅಜ್ಞಾನಿಯೂ ಸಹ ಇದು ನನ್ನ ಮತವೆಂದು ಹೇಳುತ್ತಾನೆ. ಆದ್ದರಿಂದ ಮತದಲ್ಲಿ ಎಲ್ಲರೂ ಜ್ಞಾನಿಗಳಿರುತ್ತಾರೆಂಬ ನಂಬಿಕೆ ಇಲ್ಲ.

37. ಅಜ್ಞಾನಿಗಳು ಸಹಿತವಿರುವ ಮತವು ಬೇಕೋ ಕೇವಲ ಜ್ಞಾನಿಗಳಿರುವ ಪಥವು ಬೇಕೊ ನೀನೇ ಯೋಚಿಸಿಕೊ.

38. ಯಾವ ಮತದಲ್ಲಿನ ಅಜ್ಞಾನವನ್ನಾದರು ಖಂಡಿಸು, ಯಾವ ಮತದಲ್ಲಿನ ಜ್ಞಾನವನ್ನಾದರು ಸ್ವೀಕರಿಸು.

39. ನೀನು ನನ್ನದು ಹಿಂದೂಮತವೆಂದು ಅಂದುಕೊಂಡರೆ ಇತರಮತದಲ್ಲಿನ ಜ್ಞಾನವನ್ನು ಸಹ ದ್ವೇಷಿಸುತ್ತೀಯಾ. ನನ್ನದು ಇಂದೂಪಥವೆಂದು ಅಂದುಕೊಂಡರೆ ಇತರಮತದಲ್ಲಿನ ಅಜ್ಞಾನವನ್ನು ಮಾತ್ರವೇ ದ್ವೇಷಿಸಿ ಜ್ಞಾನವನ್ನು ಪ್ರಶಂಸಿಸುತ್ತೀಯಾ.

40. ಹಿಂದೂಮತದ ಹೆಸರಿನಿಂದ ರಾಜಕೀಯವನ್ನು ಮಾಡುವವರಿಗೆ ದೂರವಾಗಿ ಇರು. ಇಂದೂಪಥದ ಹೆಸರಿನಿಂದ ರಾಜಯೋಗ ಹೇಳುವವರಿಗೆ ಹತ್ತಿರವಾಗಿರು.

41. ಮನುಷ್ಯನನ್ನು ದ್ವೇಷಿಸಬಹುದು, ಮತವನ್ನು ದ್ವೇಷಿಸಬಹುದು, ಅದರಿಂದ ಬರುವ ಪಾಪವು ಕ್ಷಮಿಸಲ್ಪಡುತ್ತದೆ.

42. ದೇವರನ್ನಾಗಲಿ, ದೇವರ ಪಥವನ್ನಾಗಲಿ ದ್ವೇಷಿಸಿದರೆ ಅದರಿಂದ ಬರುವ ಪಾಪ ಯುಗ ಯುಗಗಳ ಪರ್ಯಂತವು ಕ್ಷಮಿಸಲ್ಪಡುವುದಿಲ್ಲ.

43. ನೀನು ಜಡ್ಜಿಯಾದರೆ ನಿನಗೆ ಕಾನೂನು ತಿಳಿದಿದೆ, ಆದ್ದರಿಂದ ಪ್ರಪಂಚ ವಿಷಯಗಳಿಗೆ ಶಿಕ್ಷೆ ಹೇಳಬಹುದು. ದೇವರ ವಿಷಯಗಳಿಗೆ ಶಿಕ್ಷೆ ಹೇಳಬೇಡ. ಏಕೆಂದರೆ ದೇವರ ಕಾನೂನು ನಿನಗೆ ತಿಳಿದಿಲ್ಲ.

44. ನೀನು ನ್ಯಾಯ ನಿರ್ಣಿತನಾದ ಜಡ್ಜಿಯಾದರೆ ಪ್ರಪಂಚ ವಿಷಯಗಳಲ್ಲಿ ಇದು ಇಂತಹ ಅಪರಾಧವೆಂದು ಗುರುತಿಸುತ್ತೀಯಾ. ಆದರೆ ದೇವರ ವಿಷಯಗಳಲ್ಲಿ ಇದು ಇಂತಹ ಅಪರಾಧವೆಂದು ಗುರುತಿಸಲಾರೆ.

45. ನೀನು ನ್ಯಾಯ ನಿರ್ಣಿತನಾದರೆ ನ್ಯಾಯಾನ್ಯಾಯಗಳನ್ನು ಮಾತ್ರವೆ ಗುರುತಿಸುತ್ತೀಯಾ. ಆದರೆ ಧರ್ಮಾಧಮಗಳನ್ನು ಗುರುತಿಸುವುದಿಲ್ಲ.

46. ನೀನು ಜಡ್ಜಿಯಾದರೆ ಕೇವಲ ನ್ಯಾಯಾಧಿಕಾರಿಯೆ, ಆದರೆ ಧರ್ಮಾಧಿಕಾರಿ ಅಲ್ಲವೆಂದು ಗುರುತಿಸಿಕೋ!

47. ನೀನು ಜಡ್ಜಿಯಾದರೆ ಇಹಲೋಕ ಸಂಬಂಧ ನ್ಯಾಯವನ್ನು ಮಾತ್ರ ಗುರುತಿಸುತ್ತೀಯಾ. ಆದರೆ ಪರಲೋಕ ಸಂಬಂಧ ಧರ್ಮವನ್ನು ಗುರುತಿಸುವುದಿಲ್ಲ.

48. ನ್ಯಾಯಶಾಸ್ತ್ರವನ್ನು ಓದಿದರೆ ನೀನು ಜಡ್ಜಿ ಆಗಬಹುದು. ಆದರೆ ಯೋಗಶಾಸ್ತ್ರವನ್ನು ಓದದೆ ಯಾರೂ ಯೋಗಿ ಆಗಲಾರನು.

49. ನ್ಯಾಯಾಧಿಪತಿ ಆದ ಜಡ್ಜಿ ಮನುಷ್ಯರಿಗೆ ಮಾತ್ರ ಶಿಕ್ಷೆ ಹೇಳುತ್ತಾನೆ. ಆದರೆ ಧರ್ಮಾಧಿಪತಿ ಆದ ದೇವರು ನ್ಯಾಯಾಧಿಪತಿಗಳಿಗೂ ಸಹ ಶಿಕ್ಷೆ ಹೇಳುತ್ತಾನೆ.

50. ಸ್ವಚ್ಛವಾದ ಬಿಳಿಯದು ಜ್ಞಾನ. ಬಹಳ ಕಪ್ಪನೆಯದು ಅಜ್ಞಾನ. ಬಿಳಿಯ ವಸ್ತ್ರಗಳ ಮೇಲೆ ಪೂರ್ತಿಯಾಗಿ ಕಪ್ಪನೆಯ ಕೋಟನ್ನು ಧರಿಸಿದ ಜಡ್ಜಿ ನಾನು ಜ್ಞಾನಕ್ಕೆ ಜಡ್ಜಿಯು ಅಲ್ಲ, ಅಜ್ಞಾನಕ್ಕೆ ಮಾತ್ರವೇ ಅನ್ನುವಂತಿದೆ.

51. ಬಿಳಿಯ ವಸ್ತ್ರಗಳ ಮೇಲೆ ಕಪ್ಪನೆಯ ಚಿಕ್ಕ ಕೋಟನ್ನು ಧರಿಸಿದ ನ್ಯಾಯವಾದಿ ಗಳಾದ ಲಾಯರ್‌ಗಳಾಗಲಿ, ಕಪ್ಪನೆಯ ದೊಡ್ಡ ಕೋಟು ಧರಿಸಿದ ನ್ಯಾಯ ನಿರ್ಣಿತರಾದ ಜಡ್ಜಿಗಳಾಗಲಿ, ಕಾನೂನಿನಲ್ಲಿ ಜ್ಞಾನವನ್ನು, ಅಜ್ಞಾನವು ಮುಚ್ಚಲ್ಪಟ್ಟಿರುತ್ತದೆಂದು ಇತರರಿಗೆ ತಿಳಿಯುವಂತೆ, ಆ ವಿಧವಾಗಿ ಬಿಳಿಯದರ ಮೇಲೆ ಕಪ್ಪನ್ನು ಧರಿಸಿದ್ದಾರೆಂದುಕೊಳ್ಳುತ್ತೇವೆ.

52. ಮಾಯೆಗೆ ಎರಡು ಬಲವಾದ ಬಲೆಗಳು ಇವೆ. ಆ ಬಲೆಗಳಲ್ಲಿ ಮೀನುಗಳು ಬೀಳುವುದಿಲ್ಲ ಮನುಷ್ಯರು ಮಾತ್ರವೇ ಬೀಳುತ್ತಾರೆ. ಆ ಬಲೆಗಳ ಹೆಸರುಗಳು **ಒಂದು ಮತ. ಎರಡು ಕುಲ**. ಮತವು ಹೊಂದಿದವನು, ಕುಲ ಹೊಂದಿದವನು ಮಾಯೆ ಬಲೆಯಲ್ಲಿನವರೆ. ಮತಾತೀತನು, ಕಲಾತೀತನು ದೇವರ ಬಲೆಯಲ್ಲಿರುವವರೆ.

53. ಮತವಿಲ್ಲದವನು ದೇವರ ಪಥದಲ್ಲಿ ಇರುವವನೆ! ಕುಲ ಇಲ್ಲದವನು ಜ್ಞಾನಪಥದಲ್ಲಿ ಇರುವವನೆ!



# ರಚನಕಾರರ ಕೊನೆಯ ಮಾತು

ಮತವೆಂಬ ಮಾತೆ ಸರಿಯಾದುದು ಅಲ್ಲ. ಮತವೆನ್ನುವುದು ಮಾಯ ಮಿಳಿತವಾದದ್ದು ಆದ್ದರಿಂದ ಅದರಲ್ಲಿ ಸ್ವಮತ ಅಭಿಮಾನ ಪರಮತ ದ್ವೇಷ ಇರುತ್ತವೆ. ಎಷ್ಟೋಜನ ಅಮಾಯಕ ಪ್ರಜೆಗಳು ಮತ ದ್ವೇಷಗಳಿಂದ ಪ್ರಾಣಗಳನ್ನು ಕಳೆದು ಕೊಳ್ಳುತ್ತಿದ್ದಾರೆ. ಮತವೆ ಎಷ್ಟೋ ನಷ್ಟವನ್ನು ಉಂಟುಮಾಡುವುದಾಗಿದ್ದರೆ, ಅದಕ್ಕೆ ರಾಜಕೀಯ ಬಣ್ಣ ಅಚ್ಚಿಕೊಂಡರೆ ಮತ್ತಷ್ಟು ಪ್ರಮಾದವಾಗಿ ತಯಾರಾಗುವ ಅವಕಾಶ ಇದೆ. ಹಿಂದೂದೇಶವಾಗಿ ಹೆಸರುವಾಸಿಯಾದ ಭಾರತದೇಶದಲ್ಲಿ ಮತವನ್ನು ಬಳಸಿಕೊಳ್ಳುವುದು ಅವರಿಗೆ ಅಭ್ಯಾಸವಾಗಿದೆ. ಅಂತಹವರಿಗೆ ದೇವರ ಜ್ಞಾನದ ವಾಸನೆ ಸಹ ತಿಳಿಯದು. ಜ್ಞಾನದ ರುಚಿಯಾಗಲಿ, ವಾಸನೆಯಾಗಲಿ ತಿಳಿಯದವರೆ ಜ್ಞಾನವನ್ನು ಪ್ರಚಾರ ಮಾಡುವ ನಮ್ಮನ್ನು ತೊಂದರೆಕೊಟ್ಟು, ಅದರ ಮೂಲಕ ಅವರು ಪ್ರಚಾರ ಆಗಬೇಕೆಂದುಕೊಂಡಿದ್ದಾರೆ. ನಾವು ಯಾರನ್ನು ತೊಂದರೆ ಇಡುತ್ತಿದ್ದೇವೆಂದು ಅವರು ಯಾವ ಕಾರಣಕ್ಕೂ ಆಲೋಚಿಸುತ್ತಿಲ್ಲ. **ಹಿಂದೂ ಮತದಲ್ಲಿ ಯಾರೂ ಮಾಡದ ಪ್ರಚಾರ ನಾವು ಮಾಡುತ್ತಾ ನಲವತ್ತೈದು ಪುಸ್ತಕಗಳನ್ನು ಪ್ರಚರಿಸಿದ್ದೇವೆ.** ಅಜ್ಞಾನದಲ್ಲಿರುವ ಕ್ರೈಸ್ತರಿಗೂ ಸಹ ಅವರ ಮತದಲ್ಲಿಯೆ ಇದು ಸರಿಯಾದ ಮಾರ್ಗವೆಂದು ಹೇಳಿದ್ದೇವೆ. **ಪ್ರಬೋಧ ಸೇವಾಸಮಿತಿ, ಇಂದೂ ಜ್ಞಾನವೇದಿಕೆ** ಅನ್ನುವ ಎರಡು ಸಂಸ್ಥೆಗಳನ್ನು ಸ್ಥಾಪಿಸಿ ಅವುಗಳ ಮೂಲಕ ಎಷ್ಟೋ ದೈವಜ್ಞಾನವನ್ನು ಪ್ರಚಾರ ಮಾಡುತ್ತಿದ್ದೇವೆ. ಎಷ್ಟೋ ಜ್ಞಾನವನ್ನು ಪ್ರಚಾರ ಮಾಡುತ್ತಿರುವ ನಮ್ಮನ್ನು ವಿರೋಧಿಸುವುದು ಯಾರಿಗೂ ಒಳ್ಳೆಯದಲ್ಲ. ನಮ್ಮಲ್ಲಿ ಏನಾದರು ತಪ್ಪುಗಳಿದ್ದರೆ, ನಾವೇನಾದರು ಹಿಂದೂಮತಕ್ಕಾಗಲಿ ಇತರ ಮತಕ್ಕಾಗಲಿ ವಿರೋಧವಾಗಿದ್ದರೆ ನಮ್ಮನ್ನು ಬಹಿರಂಗವಾಗಿ ನಿಲ್ಲಿಸಿ ಕೇಳಬಹುದು. ಅದಕ್ಕೆ ಸಮಾಧಾನ ಹೇಳುವುದಕ್ಕೆ ಸಿದ್ಧವಾಗಿರುತ್ತೇವೆ. ಹಾಗಲ್ಲದೆ ನಮ್ಮ ಮೇಲೆ ಧರ್ಮವರಂ, ಬತ್ತಲಪಲ್ಲಿನಲ್ಲಿ ಮಾಡಿದಂತೆ ಧರಣೆ ಮಾಡುವುದು, ಹಂಪಿಯಲ್ಲಿ ನಡೆದಂತೆ ಕೇಸುಗಳು ಇಡುವುದು, ಮಹಾನಂದಿಯಂತೆ ಪೇಪರ್‌ಗಳಲ್ಲಿ ಹಾಕುವುದರಿಂದ ನಮಗೆ ಎಂತಹ ನಷ್ಟಬರುವುದಿಲ್ಲ. ಆದರೆ ನೀವು ಮಾತ್ರ ದೇವರ ಭಕ್ತರಾದ ದೊಡ್ಡ

ಗ್ರಹಗಳ ಕೋಪಕ್ಕೆ ಗುರಿಯಾಗುತ್ತೀರಾ! ಅದರಿಂದ ನಿಮಗೆ ಕಷ್ಟ ಬರುತ್ತದೆ! ಆದ್ದರಿಂದ ನಮ್ಮನ್ನು ವಿಮರ್ಶಿಸಿದರೆ ಇಲ್ಲಿ ಜ್ಞಾನಪರವಾಗಾಗಲಿ, ಅಲ್ಲಿ ನ್ಯಾಯಪರವಾಗಿ ಆಗಲಿ ವಿಮರ್ಶಿಸಿರಿ. ಹಾಗಲ್ಲದೆ ಅನ್ಯಾಯ ವಾಗಿ, ಅಜ್ಞಾನವಾಗಿ ವಿಮರ್ಶಿಸುವುದು ದೇವರಿಗೂ ಸಹ ಸರಿಹೋಗುವುದಿಲ್ಲವೆಂದು ತಿಳಿಸುತ್ತಿದ್ದೇವೆ.



## ತ್ರೈತ ಸಿದ್ಧಾಂತವನ್ನು ತಿಳಿಸುವ ಇಂದೂ ಜ್ಞಾನವೇದಿಕೆಯ ಬೋಧನೆಗಳು ಓದಿರಿ!

01. ವಿಶ್ವವ್ಯಾಪ್ತವಾಗಿ ಎಲ್ಲರಲ್ಲಿರುವುದು ತ್ರೈತವೆಂದು ತಿಳಿಸುವುದು ಇಂದೂ ಜ್ಞಾನವೇದಿಕೆ.
02. ವಿಶ್ವ ವ್ಯಾಪ್ತವಾಗಿರುವ ಎಲ್ಲಾ ಮತಗಳಲ್ಲಿ ಇಂದೂಮತ ಇದೆಯೆಂದು ಹೇಳುವುದು ಇಂದೂ ಜ್ಞಾನವೇದಿಕೆ.
03. ಯಾವ ಮತದವರಿಗಾದರೂ ಮತಸಾಮರಸ್ಯ ಹೊಂದಬೇಕೆಂದರೆ ದೇವರ ಜ್ಞಾನ ತಿಳಿಯಬೇಕೆನ್ನುತ್ತಿದೆ ಇಂದೂ ಜ್ಞಾನವೇದಿಕೆ.
04. ಎಲ್ಲಾ ಮತಗಳನ್ನು ಸಾಮರಸ್ಯವಾಗಿ ಬೋಧಿಸುವುದು ಇಂದೂ ಜ್ಞಾನವೇದಿಕೆ.
05. ಎಲ್ಲಾ ಮತಗಳ ಸಾರಾಂಶ ಹೊಂದಿರುವುದು ಇಂದೂ ಜ್ಞಾನವೇದಿಕೆ.
06. ಮಂತ್ರಗಳು, ಜಪಗಳು, ಉಪವಾಸಗಳು, ಧ್ಯಾನಗಳ ಜೊತೆ ಸಂಬಂಧವಿಲ್ಲದಂತೆ ಇಂದ್ರಿಯಾತೀತ ಜ್ಞಾನವನ್ನು ಬೋಧಿಸುವುದು ಇಂದೂ ಜ್ಞಾನವೇದಿಕೆ.
07. ನೀನು ನಿನ್ನ ಮತದಲ್ಲಿ ಸ್ವಚ್ಛವಾದ ಜ್ಞಾನಿಯು ಆಗಬೇಕೆಂದು ಕೋರಿಕೊಳ್ಳುವುದು ಇಂದೂ ಜ್ಞಾನವೇದಿಕೆ.
08. ಮನುಜರ ಮತಗಳಿಗತೀತವಾದ ಜ್ಞಾನವನ್ನು ತಿಳಿಸುವುದು ಇಂದೂ ಜ್ಞಾನವೇದಿಕೆ.

09. ಜೀವಾತ್ಮಗಿಂತ ದೊಡ್ಡದು ಮತ್ತು ದೇವರಿಗಿಂತ ಚಿಕ್ಕದು ಮತ್ತೊಂದಿದೆ. ಅದೇನೋ ತಿಳಿಸುವುದೇ ಇಂದೂ ಜ್ಞಾನವೇದಿಕೆ.

10. ಹಿಂದೂ ಮತಕ್ಕಿಂತ ಅತೀತವಾದ ಇಂದೂ ಮತವನ್ನು ಕುರಿತು ಹೇಳಿ ಎಲ್ಲಾ ಮತದವರಿಂದ ನಾನು ಇಂದೂ ಎಂದೂ (ಜ್ಞಾನಿಯೆಂದು) ಹೇಳುತ್ತಿದೆ ಇಂದೂ ಜ್ಞಾನವೇದಿಕೆ.

11. ಜ್ಞಾನ ವಿಷಯ ತಿಳಿದುಕೊಂಡರೆ ಪ್ರತಿಯೊಬ್ಬರು ನಾನು ಇಂದೂ ಆಗಬೇಕೆಂದು ಆತುರ ಪಡುವಂತೆ ಮಾಡುವುದು ಇಂದೂ ಜ್ಞಾನವೇದಿಕೆ.

12. ಮಾಯೆ (ಸಾತಾನ್) ಇಲ್ಲವೆ ಸೈತಾನನ್ನು ಮತ್ತು ದೇವರು ಅನ್ನುವ ಇಬ್ಬರನ್ನು ಮಾತ್ರವೇ ತಿಳಿಸುವುದೇ ಇಂದೂ ಜ್ಞಾನವೇದಿಕೆ.

13. ಭಗವದ್ಗೀತೆ, ಖುರಾನ್, ಬೈಬಿಲ್‌ನ ಸಾರಾಂಶವನ್ನು ತಿಳಿದು ಆಚರಿಸುವುದು ಇಂದೂ ಜ್ಞಾನವೇದಿಕೆ.

14. ದೇವರನ್ನು ಅಲ್ಲದೆ ಇತರೆ ಮಾಯೆಯನ್ನು (ಸೈತಾನನ್ನು) ಆರಾಧಿಸ ಬೇಡವೆಂದು ಹೇಳುವುದು ಇಂದೂ ಜ್ಞಾನವೇದಿಕೆ.

15. ದೇವರ ಜ್ಞಾನ ತಿಳಿಯದಿರುವುದೇ, ಅರ್ಥ ಆಗದಿರುವುದೇ ಭೂಮಿ ಮೇಲೆ ಎಲ್ಲಾ ಅನರ್ಥಗಳಿಗೆ ಕಾರಣವೆಂದು ತಿಳಿಸುವುದು ಇಂದೂ ಜ್ಞಾನವೇದಿಕೆ

16. ಹಿಂಸೆಯಿಂದ ಯಾವ ಮತವನ್ನು, ಯಾವ ಮನುಷ್ಯನನ್ನು ಬದಲಾಯಿಸಲಾರೆವೆಂದು, ದೇವರ ಜ್ಞಾನದಿಂದ ಯಾರನ್ನಾದರೂ ಬದಲಾಯಿಸಬಹುದೆಂದು ತಿಳಿಸುವುದೇ ಇಂದೂ ಜ್ಞಾನವೇದಿಕೆ.

17. ದೇವರ ಜ್ಞಾನ ತಿಳಿಯುವವರೆಗೂ ಯಾವ ಮತಕ್ಕೆ ಸಂಬಂಧಿಸಿರು ವುದೋ ಯಾರಿಗೂ ಅರ್ಥವಾಗದಿರುವುದು ಇಂದೂ ಜ್ಞಾನವೇದಿಕೆ.

18. ಅಣಗಾರಿ ಹೋಗಿರುವ ಆಚಾರಗಳಿಗೂ, ಸಂಪ್ರದಾಯಗಳಿಗೂ ಅರ್ಥಗಳನ್ನು ತಿಳಿಸುವುದು ಇಂದೂ ಜ್ಞಾನವೇದಿಕೆ.

19. ಭಗವದ್ಗೀತೆ ಶ್ಲೋಕಗಳಿಗೂ, ಪರಿಶುದ್ದ ಗ್ರಂಥದ ವಾಕ್ಯಗಳಿಗೂ ಪವಿತ್ರ ಗ್ರಂಥದ ಸೂತ್ರಗಳಿಗೂ ಸಾರಾಂಶವಾದ ದೇವರನ್ನು ಮಾತ್ರ ತಿಳಿಸುವುದು ಇಂದೂ ಜ್ಞಾನವೇದಿಕೆ.

20. ದೇವರ ಜ್ಞಾನವೆಂಬ ಆಯುಧದಿಂದ ದೇವರ ಸೈನಿಕನಾಗಿ ಬದಲಾಗಿ ಪಕ್ಕದಾರಿ ಹಿಡಿಸುತ್ತಿರುವ ಮಾಯೆ ಅಥವಾ ಸಾತಾನ್ ಮೇಲೆ ಪವಿತ್ರ ಯುದ್ಧ ಮಾಡಬೇಕು

ಆದರೆ ಸಾಟಿ (ಪಕ್ಕ) ಮನುಷ್ಯರ ಮೇಲೆ ಅಲ್ಲವೆಂದು ತಿಳಿಸುವುದೆ ಇಂದೂ ಜ್ಞಾನವೇದಿಕೆ.

21. ಶಾಸ್ತ್ರೀಯತೆಯನ್ನು ಅಶಾಸ್ತ್ರೀಯತೆಯನ್ನು ತಿಳಿಸುವುದು ಇಂದೂ ಜ್ಞಾನವೇದಿಕೆ.

22. ಗೀತಾಶಾಸ್ತ್ರದ ಆಧಾರದಿಂದ ಆಸ್ತಿಕರ ನಾಸ್ತಿಕರ ವಾಸ್ತವವನ್ನು ತಿಳಿಸುವುದು ಇಂದೂ ಜ್ಞಾನವೇದಿಕೆ.

23. ಜ್ಯೋತಿಷ್ಯ ಶಾಸ್ತ್ರವೆಂದು, ವಾಸ್ತು ಶಾಸ್ತ್ರವು ಅಲ್ಲವೆಂದು ವಿವರಿಸಿ ಹೇಳುವುದು ಇಂದೂ ಜ್ಞಾನವೇದಿಕೆ.

24. ಯಜ್ಞಯಾಗಾದಿಗಳು, ವ್ರತಕ್ರತುಗಳು, ವೇದಾಧ್ಯಯನಗಳು, ತಪಸ್ಸುಗಳು ದೈವಸಮ್ಮತ ಅಲ್ಲವೆಂದು ತಿಳಿಸುವುದು ಇಂದೂ ಜ್ಞಾನವೇದಿಕೆ.

25. ನಂಬಿಕೆ ಮೂಢನಂಬಿಕೆ ಆಗಬಹುದು ಜಾಗ್ರತೆಯಾಗಿ ಪರಿಶೀಲಿಸ ಬೇಕೆಂದು ತಿಳಿಸುವುದು ಇಂದೂ ಜ್ಞಾನವೇದಿಕೆ.

26. ಮೂಢನಂಬಿಕೆಯಲ್ಲಿ ಮೂಢತ್ವವನ್ನು ವಿವರಿಸಿ ಖಂಡಿಸುವುದು ಇಂದೂ ಜ್ಞಾನವೇದಿಕೆ.

27. ನಾಲ್ಕು ಕುಲಗಳು ಇಲ್ಲವೆಂದು ನಾಲ್ಕು ಪದ್ಧತಿಗಳು ಇವೆಯೆಂದು ಕುಲ ರಹಿತವನ್ನು ತಿಳಿಸುವುದು ಇಂದೂ ಜ್ಞಾನವೇದಿಕೆ.

28. ಮತಗಳು ಮನುಷ್ಯರ ಸೃಷ್ಟಿಯೇ ಎಂದು ದೇವರಿಗೆ ಮತಗಳು ಇಲ್ಲವೆಂದು ತಿಳಿಸುವುದು ಇಂದೂ ಜ್ಞಾನವೇದಿಕೆ.

29. ದೇವರು ಒಬ್ಬನೇ ಎಂದು ಎಲ್ಲರಿಗಿಂತ ದೊಡ್ಡವನೆಂದು ಹೇಳುವವರು, ನಮ್ಮ ಮತವೆಂದು, ನಮ್ಮ ದೇವರೆಂದು ಹೇಳುವುದು ತಪ್ಪು ಅಲ್ಲವೆ ಎಂದು ವಿಮರ್ಶಿಸುವುದು ಇಂದೂ ಜ್ಞಾನವೇದಿಕೆ.

30. ಮನುಷ್ಯರೆಲ್ಲರಿಗೂ ದೇವರು ಒಬ್ಬನೇ, ದೈವಜ್ಞಾನ ಒಂದೇ ಎಂದು ಹೇಳುವುದು ಇಂದೂ ಜ್ಞಾನವೇದಿಕೆ.

31. ಜ್ಞಾನವನ್ನು ವಿಜ್ಞಾನಸಹಿತವಾಗಿ ವಿವರಿಸಿ ಹೇಳುವುದು ಇಂದೂ ಜ್ಞಾನವೇದಿಕೆ.

32. ಪ್ರಜೆಗಳಿಗೆ ಮಹಿಮೆಗಳು ಅನಗತ್ಯವೆಂದು, ಜ್ಞಾನ ಅಗತ್ಯವೆಂದು ಹೇಳುವುದು ಇಂದೂ ಜ್ಞಾನವೇದಿಕೆ.

33. ಶಾಸ್ತ್ರಬದ್ಧವಲ್ಲದ ರಾಮಾಯಣವನ್ನು, ಹೇತುಬದ್ಧವಲ್ಲದ ಭಾಗವತವನ್ನು ಬಿಟ್ಟು ಶಾಸ್ತ್ರಬದ್ಧತೆ ಹೊಂದಿದ ಗೀತೆಯನ್ನು ನೋಡೆನ್ನುತ್ತಿದೆ ಇಂದೂ ಜ್ಞಾನವೇದಿಕೆ.

34. ಹೇತುವಿಲ್ಲದ ಹೇತುವಾದಿಗಳನ್ನು, ಆಸ್ತಿಕತ್ವವಿಲ್ಲದ ಆಸ್ತಿಕರನ್ನು ವಿಮರ್ಶಿಸುವುದು ಇಂದೂ ಜ್ಞಾನವೇದಿಕೆ.

35. ಭಗವಂತನಿಗೂ, ಪರಮಾತ್ಮನಿಗೂ, ದೇವರಿಗೆ ಬಿಡಿಬಿಡಿಯಾಗಿ ಅರ್ಥ ನಿರ್ವಚನೆ ತಿಳಿಸುವುದು ಇಂದೂ ಜ್ಞಾನವೇದಿಕೆ.

36. ಜ್ಯೋತಿಷ್ಯದಲ್ಲಿನ ಜ್ಯೋತಿಯನ್ನು, ಮೂಲಿಕೆಗಳಲ್ಲಿನ ಮೂಲವನ್ನು, ಜ್ಞಾನದಲ್ಲಿನ ಶಕ್ತಿಯನ್ನು, ಮಂತ್ರದಲ್ಲಿನ ಮಹಿಮೆಯನ್ನು ತಿಳಿಸುವುದು ಇಂದೂ ಜ್ಞಾನವೇದಿಕೆ.

37. ಟಕ್ಕು, ಟಮಾರಾ ಅಂದರೆ ಏನೋ, ಇಂದ್ರಜಾಲ ಮಹೇಂದ್ರಜಾಲ ಅಂದರೆ ಏನೋ, ಗೋಕರ್ಣ ಗಜಕರ್ಣ ವಿದ್ಯೆಗಳೆಂದರೆ ಏನೋ ಬಿಡಿಬಿಡಿಯಾಗಿ ವಿವರಿಸಿ ತಿಳಿಸುವುದುಇಂದೂ ಜ್ಞಾನವೇದಿಕೆ.

38. ಪ್ರಭು ದೇವರು, ಶಿಲುಬೆ ಮಾಯೆ ಎಂದು ತಿಳಿಸುವುದು ಇಂದೂ ಜ್ಞಾನವೇದಿಕೆ.

39. ಮತಗಳಲ್ಲಿನ ವಿಧಾನವನ್ನು, ಸಿದ್ಧಾಂತಗಳಲ್ಲಿನ ಸಾರವನ್ನು, ಶಾಸ್ತ್ರಗಳಲ್ಲಿನ ಶಾಸ್ತ್ರೀಯತೆಯನ್ನು ಹುಡಿಕಿ ಇದ್ದರೆ ತೋರಿಸುವುದು ಇಲ್ಲದಿದ್ದರೆ ಪ್ರಶ್ನಿಸುವುದು ಇಂದೂ ಜ್ಞಾನವೇದಿಕೆ.

40. ಮನುಷ್ಯ ಒಬ್ಬನೇ, ದೇವರು ಒಬ್ಬನೇ ಆದಾಗ ಇಷ್ಟು ಮತಗಳು, ಇಷ್ಟುಜನ ದೇವರುಗಳು ಏತಕ್ಕೆಂದು ಪ್ರಶ್ನಿಸುವುದು ಇಂದೂ ಜ್ಞಾನವೇದಿಕೆ.

41. ಮನುಷ್ಯರಿಂದ ಮಹಾತ್ಮನು, ಗಿಡಗಳಿಂದ ಬದನಿಕೆ ಹೊರಗೆ ಬಂದಂತೆ, ಅಜ್ಞಾನಿಗಳಿಂದಲೆ ಜ್ಞಾನಿ ಹುಟ್ಟುತ್ತಾನೆಂದು ತಿಳಿಸುವುದೇ ಇಂದೂ ಜ್ಞಾನವೇದಿಕೆ.

42. ಬೇರೆ ಮತಗಳಲ್ಲಿನ ಅಪಾರ್ಥಗಳಿಗೆ ನಿಜಾರ್ಥವನ್ನು ಕೊಟ್ಟು ಜ್ಞಾನಬೋಧನೆ ಮಾಡುವುದು ಇಂದೂ ಜ್ಞಾನವೇದಿಕೆ.

43. ಐದನ್ನೊಂದು ಆದ ಆರು ಶಾಸ್ತ್ರಗಳಲ್ಲಿನ ಶಾಸ್ತ್ರಬದ್ಧತೆಯನ್ನು ತೋರಿಸುವುದು ಇಂದೂ ಜ್ಞಾನವೇದಿಕೆ.

44. ಶಾಸ್ತ್ರವಲ್ಲದ ವಿಷಯಗಳು ಶಾಸ್ತ್ರದಲ್ಲಿ ಬೆರೆತಿದ್ದರು ಅವುಗಳನ್ನು ತೆಗೆದುಹಾಕಿ ಶಾಸ್ತ್ರಕ್ಕೆ ಸ್ವಚ್ಚತೆಯನ್ನು ಕೈಗೂಡಿಸುವುದು ಇಂದೂ ಜ್ಞಾನವೇದಿಕೆ.

45. ಶಾಸ್ತ್ರವನ್ನು ಗುರತಿಸಲಾರದೆ ಅಶಾಸ್ತ್ರೀಯ ಅನ್ನುವವರಿಗೆ ಕಣ್ಣುತೆರೆಸಿ ಶಾಸ್ತ್ರದಲ್ಲಿನ ಶಾಸ್ತ್ರೀಯತೆಯನ್ನು ತಿಳಿಸುವುದು ಇಂದೂ ಜ್ಞಾನವೇದಿಕೆ.

46. ಅಜ್ಞಾನದಲ್ಲಿನ ಅಂಧಕಾರವನ್ನು, ಜ್ಞಾನದಲ್ಲಿನ ಪ್ರಕಾಶವನ್ನು, ವಿಜ್ಞಾನದಲ್ಲಿನ ಅನುಭವವನ್ನು ವಿವರಿಸಿ ತಿಳಿಸುವುದು ಇಂದೂ ಜ್ಞಾನವೇದಿಕೆ.

47. ಸತ್ಯವನ್ನು ಪ್ರಕಟಿಸುವುದು, ಅಸತ್ಯವನ್ನು ಖಂಡಿಸುವುದು ಮುಖ್ಯ ಕಾರ್ಯವಾಗಿ ಇಟ್ಟುಕೊಂಡಿದೆ ಇಂದೂ ಜ್ಞಾನವೇದಿಕೆ.

48. ಪೂರ್ವವಿದ್ದು ಈಗ ಇಲ್ಲದಂತೆ ಹೋಗಿರುವ ವಿಜ್ಞಾನವನ್ನು ವಿವರಿಸಿ ತಿಳಿಸುವುದು ಇಂದೂ ಜ್ಞಾನವೇದಿಕೆ.

49. ಶರೀರದಲ್ಲಿ ಪಿಟ್ಯೂಟರಿ ಗ್ಲಾಂಡ್, ಉಳಿದ ಆರು ಗ್ರಂಥಿಗಳಿಗೆ ರಾಜನಂತೆ ವಿಶ್ವದಲ್ಲಿ ಬ್ರಹ್ಮವಿದ್ಯಾಶಾಸ್ತ್ರ ಉಳಿದ ಐದುಶಾಸ್ತ್ರಗಳಿಗೆ ರಾಜನಾಗಿದೆ ಎಂದು ತಿಳಿಸುವುದು ಇಂದೂ ಜ್ಞಾನವೇದಿಕೆ.

50. ಆಸ್ತಿಕವಾದಿಗಳಿಗೂ, ನಾಸ್ತಿಕವಾದಿಗಳಿಗೂ, ಹೇತುವಾದಿಗಳಿಗೂ ಮೊದಲಾದವರಿಗೂ ತಿಳಿಯದವನು ದೇವರೆಂದು ತಿಳಿಸುವುದು ಇಂದೂ ಜ್ಞಾನವೇದಿಕೆ.

51. ಟೆಲಿವಿಜನ್‌ನನ್ನು ಕಾಣಿಸುವ ಯಾವ ಸಂಬಂಧ ಇಲ್ಲದಂತೆ ಕೈಯಲ್ಲಿ ರಿಮೋಟ್ ನಡೆಸಿದಂತೆ ಗಿಡಗಳ ಮೇಲಿನ ಬಳ್ಳಿಯನ್ನು ಕಾಣಿಸುವ ಯಾವ ಸಂಬಂಧ ಇಲ್ಲದಂತೆ ಭೂಮಿಯಲ್ಲಿನ ಗಡ್ಡೆ ಬೆಳೆಸುವಂತೆ, ಮನುಷ್ಯನನ್ನು ಕಾಣಿಸುವ ಯಾವ ಸಂಬಂಧವು ಇಲ್ಲದಂತೆ ಶೂನ್ಯದಲ್ಲಿನ ದೇವರು ಪೋಷಿಸುತ್ತಿದ್ದಾನೆಂದು ತಿಳಿಸುವುದು ಇಂದೂ ಜ್ಞಾನವೇದಿಕೆ.



***ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರ ಎಷ್ಟು ಅಗತ್ಯವೋ, ಹಾಗೆ ಒಂದು ವಿಷಯವನ್ನು ಖಂಡಿಸುವುದಕ್ಕೆ ಶಾಸ್ತ್ರ ಅಷ್ಟೇ ಅಗತ್ಯವಾಗುತ್ತದೆ.***



***ಅಸತ್ಯವನ್ನು ಸಾವಿರಜನರು ಹೇಳಿದರೂ ಅದು ಸತ್ಯವು ಅಲ್ಲ,***
***ಸತ್ಯವನ್ನು ಸಾವಿರಜನರು ಅಲ್ಲಎಂದರೂ ಅದು ಅಸತ್ಯವು ಅಲ್ಲ.***

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ, ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.

2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.

3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.

4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.

5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.

6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

ಮತಗಳು ನಿಷೇಧ, ನಿಷಿದ್ಧ. ಕುಲಗಳು ಅಹೇತುಕ, ಅಶಾಸ್ತ್ರೀಯ.

ಭಗವದ್ಗೀತಾ, ಬೈಬಲ್, ಖುರಾನ್ ಮೂರೂ ಒಂದೇ ದೈವಗ್ರಂಥಗಳಲ್ಲಿನ ಭಾಗಗಳೇ.

ನಿಮ್ಮ ಮನೋಭಾವನೆಗಳು ಕುಲಮತಗಳಿಗೆ ಅತೀತವಾದರೇ ಕೂಡಲೇ "ಪ್ರಬೋಧ ಸೇವಾಸಮಿತಿ" ಯಲ್ಲಿ ಸದಸ್ಯರಾಗಿ ಸೇರಿರಿ. ದೇವರು ನಿಮ್ಮನ್ನು ಜ್ಞಾನಿಗಳಾಗಿ ಮಾಡಬೇಕೆಂದು ಕೋರುತ್ತಿರುವ

--ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು

**Cell:09705864675, 09440556968, 9611133635**

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಸುವಾರ್ತ ಕ್ರೈಸ್ತವ ಸಂಘ







**ಸುವಾರ್ತ ಕ್ರೈಸ್ತವ ಸಂಘ (S.K.S)**

(Regd.No.: 159/2015)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@suvarthakraisthavasangham.org

*www. suvarthakraisthavasangham.org*

# ಮತ–ಪಥ



ತ್ರಿಮತ ಏಕೈಕ ಗುರುವು

ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು